(5) The terms and conditions of the original allotment made in the Government order read at (1) above are **IPSOFACTO** applicable.

By Order and in the Name of the Governor of Karnataka,

**K.L. JAYARAM**

P.R. 1340 Under Secretary to Government, Energy Department.

**ಇಂಧನ ಸಚಿವಾಲಯ**

**ತಿದ್ದುಪಡಿ ಸಂಖ್ಯೆ: ಇಂಇ 99 ಎನ್‌ಸಿಇ 2004, ಬೆಂಗಳೂರು, ದಿನಾಂಕ: 10ನೇ ನವೆಂಬರ್ 2004**

ಸರ್ಕಾರಿ ಆದೇಶ ಸಂಖ್ಯೆ: ಇಂಇ 99 ಎನ್‌ಸಿಇ 2004, ದಿನಾಂಕ: 7.7.2004 ರಲ್ಲಿ ಪ್ರಸ್ತಾವನೆ ಮತ್ತು ಆದೇಶದ ಭಾಗದಲ್ಲಿ "ಮಂಡ್ಯ ಜಿಲ್ಲೆಯ ಮದ್ದೂರು ತಾಲ್ಲೂಕು" ಎಂದು ಇರುವುದನ್ನು "ಮಂಡ್ಯ ಜಿಲ್ಲೆಯ ಮಂಡ್ಯ ತಾಲ್ಲೂಕು" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್. ಜಯರಾಂ**

ಪಿ.ಆರ್. 1341 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಅತ್ಯಾವಶ್ಯಕ ಸೇವೆಗಳ ನಿರ್ವಹಣಾ ಅಧಿನಿಯಮ 1994ರ ಅಡಿಯಲ್ಲಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಹಾಗೂ ಖಾಸಗಿ ವಿದ್ಯುತ್ ಉತ್ಪಾದನಾ ಸಂಸ್ಥೆಗಳ ನೌಕರರ ಕಾರ್ಯನಿರ್ವಹಣಾ ನಿರಾಕರಣೆಯನ್ನು ಬಹಿಷ್ಕರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಇಂಇ 40 ಪಿಪಿಸಿ 2004, ದಿನಾಂಕ: 15.6.2004.

2. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ಇವರ ಪತ್ರ ಸಂಖ್ಯೆ: ಎ1ಆರ್1 ಹೆಚ್ 9056, ದಿನಾಂಕ: 5.11.2004.

**ಪ್ರಸ್ತಾವನೆ:**

ಕರ್ನಾಟಕ ಅತ್ಯಾವಶ್ಯಕ ನಿರ್ವಹಣಾ ಕಾಯ್ದೆ 1994 ರನ್ವಯ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಹಾಗೂ ರಾಜ್ಯದ ಇತರ ಎಲ್ಲಾ ಖಾಸಗಿ ವಿದ್ಯುತ್ ಉತ್ಪಾದನಾ ಸಂಸ್ಥೆಗಳ ಎಲ್ಲಾ ವರ್ಗದ ನೌಕರರಿಗೂ ಅನ್ವಯವಾಗುವಂತೆ ದಿನಾಂಕ: 1.7.2004 ರಿಂದ ಜಾರಿಗೆ ಬರುವಂತೆ ಆರು ತಿಂಗಳ ಅವಧಿಗೆ ಕರ್ತವ್ಯ ನಿರ್ವಹಣಾ ನಿರಾಕರಣೆಯನ್ನು ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ನಿಷೇಧಿಸಲಾಗಿತ್ತು. ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಇವರು ರಾಜ್ಯದಲ್ಲಿ ಪ್ರಸಕ್ತ ಬಿಕ್ಕಟ್ಟು ಮುಂದುವರಿಸದಿರುವುದರಿಂದ ವಿದ್ಯುತ್ ಉತ್ಪಾದನಾ ಕಾರ್ಯದಲ್ಲಿ ತೊಡಗಿಸಿಕೊಂಡಿರುವ ನೌಕರರು ಹಠಾತ್ ಮುಷ್ಕರ ನಡೆಸಿದಲ್ಲಿ ಪರಿಸ್ಥಿತಿಯನ್ನು ಎದುರಿಸುವುದು ಕಷ್ಟಕರವಾಗುವ ಹಿನ್ನಲೆಯಲ್ಲಿ ದಿನಾಂಕ: 1.1.2005 ರಿಂದ ಜಾರಿಗೆ ಬರುವಂತೆ ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಎಲ್ಲಾ ಸೇವೆಗಳ ಕರ್ತವ್ಯ ನಿರ್ವಹಣಾ ನಿರಾಕರಣೆಯನ್ನು ನಿಷೇಧಿಸಿ ಆದೇಶ ಹೊರಡಿಸಬೇಕೆಂದು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

2. ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಂಇ 98 ಪಿಪಿಸಿ 2004, ಬೆಂಗಳೂರು, ದಿನಾಂಕ: 26ನೇ ನವೆಂಬರ್ 2004**

3. ಕರ್ನಾಟಕ ಅತ್ಯಾವಶ್ಯಕ ಸೇವೆಗಳ ನಿರ್ವಹಣಾ ಅಧಿನಿಯಮ 1994 ರನ್ವಯ ಕರ್ನಾಟಕ ವಿದ್ಯುತ್ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಉತ್ಪಾದನೆ, ಸಂಗ್ರಹಣೆ, ವಿತರಣೆ, ಸರಬರಾಜು, ಅಥವಾ ಪ್ರಸರಣಕ್ಕೆ ಸಂಬಂಧಿಸಿದ ಸೇವೆಯನ್ನು ಅತ್ಯಾವಶ್ಯಕ ಸೇವೆಗಳ ನಿರ್ವಹಣಾ ಅಧಿನಿಯಮ, 1994ರ ಪ್ರಕರಣ (3) ಉಪ ಪ್ರಕರಣ (3) ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಹಾಗೂ ರಾಜ್ಯದ ಎಲ್ಲಾ ಖಾಸಗಿ ವಿದ್ಯುತ್ ಉತ್ಪಾದನಾ ಸಂಸ್ಥೆಗಳ ಎಲ್ಲಾ ವರ್ಗದ ಸೇವೆಗಳಿಗೂ ಅನ್ವಯವಾಗುವಂತೆ ದಿನಾಂಕ: 1.1.2005 ರಿಂದ 30.6.2005 ರವರೆಗೆ ಆರು ತಿಂಗಳ ಅವಧಿಗೆ ಕರ್ತವ್ಯ ನಿರ್ವಹಣಾ ನಿರಾಕರಣೆಯನ್ನು ನಿಷೇಧಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್. ಜಯರಾಂ**

ಪಿ.ಆರ್. 1342 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆಸರ್ಸ್ ಜಿನೇವಾ ಪವರ್ ಲಿಮಿಟೆಡ್ ಕಂಪೆನಿಗೆ ಕಿರು ಜಲ ವಿದ್ಯುತ್ ಯೋಜನೆಗಾಗಿ ವಿಧಿಸಿದ ಷರತ್ತನ್ನು 8 ತಿಂಗಳಿಂದ 18 ತಿಂಗಳಿಗೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಇಂಇ 54 ಎನ್‌ಸಿಇ 2004, ದಿನಾಂಕ: 22.7.2004

2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಜಿನೆವಾ/2003/1770, ದಿನಾಂಕ: 25.9.2004.

**ಪ್ರಸ್ತಾವನೆ:**

ಮೆಸರ್ಸ್ ಜಿನೇವಾ ಪವರ್ ಲಿಮಿಟೆಡ್ ಕಂಪೆನಿಗೆ ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ಚಿಕ್ಕಮಗಳೂರು ಜಿಲ್ಲೆಯ ಚಿಕ್ಕಮಗಳೂರು ತಾಲ್ಲೂಕಿನ ಗಿರಿಕಾನ ಕಾಫಿ ತೋಟದ ಕೊಳಗಾವಿ ತೊರೆಗೆ ಅಡ್ಡಲಾಗಿ 3.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆ ಹಂಚಿಕೆ ಮಾಡಲಾಗಿದ್ದು ಯೋಜನೆಯನ್ನು 6 ತಿಂಗಳ ಒಳಗಾಗಿ ಪ್ರಾರಂಭಿಸಬೇಕೆಂಬ ಷರತ್ತನ್ನು ವಿಧಿಸಲಾಗಿತ್ತು.

2. ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಸದರಿ ಕಂಪೆನಿಗೆ ಯೋಜನಾ ಪ್ರಾರಂಭಕ್ಕಾಗಿ ವಿಧಿಸಿರುವ ಷರತ್ತನ್ನು 6 ತಿಂಗಳ ಬದಲಾಗಿ 18 ತಿಂಗಳುಗಳೆಂದು ಮಾರ್ಪಡಿಸಬೇಕಾಗಿ ಸರ್ಕಾರವನ್ನು ಕೋರಿರುವ ಹಿನ್ನಲೆಯಲ್ಲಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಂಇ 54 ಎನ್‌ಸಿಇ 2004, ಬೆಂಗಳೂರು, ದಿನಾಂಕ: 24ನೇ ನವೆಂಬರ್ 2004**

3. ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆಸರ್ಸ್ ಜಿನೇವಾ ಪವರ್ ಲಿಮಿಟೆಡ್ ಕಂಪೆನಿಗೆ ಚಿಕ್ಕಮಗಳೂರು ಜಿಲ್ಲೆಯ ಚಿಕ್ಕಮಗಳೂರು ತಾಲ್ಲೂಕಿನ ಗಿರಿಕಾನ ಕಾಫಿ ತೋಟದ ಕೊಳಗಾವಿ ತೊರೆಗೆ ಅಡ್ಡಲಾಗಿ 3.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್

ಯೋಜನೆಯ ಪ್ರಾರಂಭಕ್ಕಾಗಿ ಮೇಲೆ (1)ರ ಆದೇಶದಲ್ಲಿ ನಿಗದಿಪಡಿಸಲಾದ 6 ತಿಂಗಳ ಒಳಗಾಗಿ ಪ್ರಾರಂಭಿಸಬೇಕೆಂದು ಷರತ್ತಿನ ಬದಲಾಗಿ, ಯೋಜನೆಯನ್ನು 18 ತಿಂಗಳ ಒಳಗಾಗಿ ಪೂರ್ಣಗೊಳಿಸಿ ವಿದ್ಯುತ್ ಉತ್ಪಾದನೆಯನ್ನು ಪ್ರಾರಂಭಿಸಬೇಕೆಂಬ ಷರತ್ತನ್ನು ವಿಧಿಸಲಾಗಿದೆ.

4. ಮೇಲೆ (1) ರಲ್ಲಿ ಓದಲಾದ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್. ಜಯರಾಂ**

ಪಿ.ಆರ್. 1343 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಎಸ್.ಎಸ್.ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 74 ಎಸ್‌ಇ ಎನ್ 2002 ದಿನಾಂಕ: 7.4.2004.

2. ಶ್ರೀ ಎಸ್.ಎಸ್.ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಶನ್ಸ್ ನ್ಯಾಯಾಧೀಶರ ವರದಿ ದಿನಾಂಕ:9.11.2004.

**ಪ್ರಸ್ತಾವನೆ:**

ಬೀದರ್ ಜಿಲ್ಲಾ ಪಂಚಾಯತ್‌ನಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಿಂದ ಅನುಮೋದಿಸಲ್ಪಟ್ಟ ಪಟ್ಟಿಯಲ್ಲಿಲ್ಲದ ಇಲಾಖೆಗೆ ಉಪಯೋಗಕ್ಕೆ ಬಾರದ ಹಾಗೂ ಔಷಧವಲ್ಲದ Amcrylae and Bio Adesive ಎಂಬ ರಸಾಯನಿಕವನ್ನು ಖರೀದಿಸುವ ಮೂಲಕ ಸರ್ಕಾರಕ್ಕೆ ಲಕ್ಷಾಂತರ ರೂಪಾಯಿಗಳ ನಷ್ಟವುಂಟುಮಾಡಿ ತೀವ್ರ ದುರ್ನಡತೆ ಎಸಗಿದ ಆರೋಪಕ್ಕಾಗಿ ಶ್ರೀ ರವಿಕುಮಾರ್ ಕಮಲಾಪುರಕರ್, ಮುಖ್ಯಲೆಕ್ಕಾಧಿಕಾರಿ, ಜಿಲ್ಲಾ ಪಂಚಾಯತ್, ಬೀದರ್, ಶ್ರೀ ವಿಶ್ವನಾಥ ಪ್ರಥಮ ದರ್ಜೆ ಸಹಾಯಕ, ಶ್ರೀ ಮಾಚಕಲ್ಲಪ್ಪ ಪ್ರಥಮ ದರ್ಜೆ ಸಹಾಯಕ, ಜಿಲ್ಲಾ ಪಂಚಾಯತ್ ಬೀದರ್ ಹಾಗೂ ನಿವೃತ್ತ ಅಧಿಕಾರಿಗಳಾದ ಶ್ರೀ ವೈ.ಸದಾಶಿವ ಕೆಎಎಸ್ (ನಿ) ಕಾರ್ಯನಿರ್ವಹಣಾಧಿಕಾರಿ ಜಿಲ್ಲಾಪಂಚಾಯತ್, ಬೀದರ್, ಡಾ:ಕೆ.ಸುಂದರಮ್ಮ, ನಿವೃತ್ತ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ, ಬೀದರ್, ಮತ್ತು ಶ್ರೀ ಸೈಯದ್ ಸತ್ತಾರ್, ನಿವೃತ್ತ ಪತ್ರಾಂಕಿತ ಸಹಾಯಕರು ಜಿಲ್ಲಾ ಪಂಚಾಯತ್, ಬೀದರ್ ಅವರುಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (1) ರಲ್ಲಿ ಓದಲಾದ ದಿನಾಂಕ:7.4.2004ರ ಸರ್ಕಾರಿ ಆದೇಶದಲ್ಲಿ ಶ್ರೀ ಎಸ್.ಎಸ್.ಸಂಗೊಳ್ಳಿ ನಿವೃತ್ತ ಜಿಲ್ಲಾ ಮತ್ತು ಸೆಶನ್ಸ್ ನ್ಯಾಯಾಧೀಶ ಇ ವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ(2) ರಲ್ಲಿ ಓದಲಾದ ದಿನಾಂಕ:9.11.2004 ರ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಈ ಸಂಬಂಧ ಅವರಿಗೆ ಗೌರವ ಧನ ಹಾಗೂ ವಾಹನಭತ್ಯೆ ಮಂಜೂರು ಮಾಡಲು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ:ಸಿಆಸುಇ 74 ಎಸ್‌ಇ ಎನ್ 2002 ಬೆಂಗಳೂರು, ದಿನಾಂಕ: 1ನೇ ಡಿಸೆಂಬರ್ 2004**

ಸರ್ಕಾರವು ಶ್ರೀ ಎಸ್.ಎಸ್.ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಶನ್ಸ್ ನ್ಯಾಯಾಧೀಶರು, ಇ ವರು ವಿಚಾರಣಾ ವರದಿ ಸಲ್ಲಿಸಿದ ಕಾರಣ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಸೇಇವಿ 96, ದಿನಾಂಕ: 24-4-1998 ರನ್ವಯ 5,000/- (ಐದು ಸಾವಿರ ರೂಪಾಯಿಗಳು ಮಾತ್ರ) ರೂಪಾಯಿಗಳ ಗೌರವ ಧನವನ್ನು ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001, ದಿನಾಂಕ:4-3-2002 ರನ್ವಯ 1,000/- (ಒಂದು ಸಾವಿರ ರೂಪಾಯಿಗಳು ಮಾತ್ರ) ರೂಪಾಯಿಗಳ ವಾಹನ ಭತ್ಯೆಯನ್ನು ಇ ವರಿಗೆ ಪಾವತಿ ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ಬಗೆಗಿನ ವೆಚ್ಚವನ್ನು ಆಯವ್ಯಯದ ಲೆಕ್ಕ ಶೀರ್ಷಿಕೆ "2052 ಸಚಿವಾಲಯ ಸಾಮಾನ್ಯ ಸೇವೆಗಳು-090-ಸಚಿವಾಲಯ-01, ಕರ್ನಾಟಕ ಸರ್ಕಾರದ ಸಚಿವಾಲಯ-014 ಇತರೆ ಭತ್ಯೆಗಳು" ರಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 1344 ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ),

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3)

**ವಿಷಯ:** ಶ್ರೀ ಬಿ.ರಂಗಸ್ವಾಮಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 60 ಎಸ್‌ಇ ಎನ್ 2002 ದಿನಾಂಕ: 8.6.2004.

2. ಶ್ರೀ ಬಿ.ರಂಗಸ್ವಾಮಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರ ವರದಿ ದಿನಾಂಕ: 8.11.2004.

**ಪ್ರಸ್ತಾವನೆ:**

ಶ್ರೀ ಅಬ್ದುಲ್ ಖಯ್ಯುಂ ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರು ಹೊಸಕೋಟೆ ತಾಲ್ಲೂಕು ತಹಶೀಲ್ದಾರ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಹೊಸಕೋಟೆ ತಾಲ್ಲೂಕಿನ ಅನುಗೊಂಡನ ಹಳ್ಳಿ ಹೋಬಳಿ, ನಾಗನಾಯಕನಕೋಟೆ ಸರ್ವೆ ನಂ.75:1 ರಲ್ಲಿ 0.39 ಗುಂಟೆ ಜಮೀನು ಬಾಬ್ತು ಪಹಣಿ ಕಲಂ 12(2) ರಲ್ಲಿ ಜಮೀನಿನ ಖಾತೆಯ ಶ್ರೀ ಗೋಪಣ್ಣ ಎಂಬುವರ ಹೆಸರಿನಲ್ಲಿದ್ದರೂ ಖಾತೆದಾರರ ವಿರುದ್ಧವಾಗಿ ಅನಧಿಕೃತ ವ್ಯಕ್ತಿ ಶ್ರೀ ಹೆಚ್.ವೆಂಕಟರಾಮಯ್ಯನವರ ಹೆಸರನ್ನು ನಮೂದು ಮಾಡಲು ಆದೇಶ ಮಾಡಿ ಕರ್ನಾಟಕ ಭೂಕಂದಾಯ ಕಾಯಿದೆ 1964 ರ ಕಲಂ 127 ನ್ನು ಉಲ್ಲಂಘಿಸಿ ಕರ್ತವ್ಯಲೋಪವೆಸಗಿದ ಆರೋಪಕ್ಕಾಗಿ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (1) ರಲ್ಲಿ ಓದಲಾದ ದಿನಾಂಕ:8.6.2004 ಸರ್ಕಾರಿ ಆದೇಶದಲ್ಲಿ ಶ್ರೀ ಬಿ.ರಂಗಸ್ವಾಮಿ ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇ ವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ(2) ರಲ್ಲಿ ಓದಲಾದ ದಿನಾಂಕ:8.11.2004 ರ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಈ ಸಂಬಂಧ ಅವರಿಗೆ ಗೌರವ ಧನ ಹಾಗೂ ವಾಹನಭತ್ಯೆ ಮಂಜೂರು ಮಾಡಲು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಸಿಆಸುಇ 60 ಎಸ್‌ಇ ಎನ್ 2002 ಬೆಂಗಳೂರು, ದಿನಾಂಕ: 1ನೇ ಡಿಸೆಂಬರ್ 2004**

ಸರ್ಕಾರವು ಶ್ರೀ ಬಿ.ರಂಗಸ್ವಾಮಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇ ವರು ವಿಚಾರಣಾ ವರದಿ ಸಲ್ಲಿಸಿದ ಕಾರಣ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಸೇಇ ವಿ 96, ದಿನಾಂಕ:24-4-1998 ರನ್ವಯ 5,000/- (ಐದು ಸಾವಿರ ರೂಪಾಯಿಗಳು ಮಾತ್ರ) ರೂಪಾಯಿಗಳ ಗೌರವ ಧನವನ್ನು ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇ ವಿ 2001, ದಿನಾಂಕ:4-3-2002 ರನ್ವಯ 1,000/-(ಒಂದು ಸಾವಿರ ರೂಪಾಯಿಗಳು ಮಾತ್ರ) ರೂಪಾಯಿಗಳ ವಾಹನ ಭತ್ಯೆಯನ್ನು ಇ ವರಿಗೆ ಪಾವತಿ ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ಬಗೆಗಿನ ವೆಚ್ಚವನ್ನು ಆಯವ್ಯಯದ ಲೆಕ್ಕ ಶೀರ್ಷಿಕೆ "2052 ಸಚಿವಾಲಯ ಸಾಮಾನ್ಯ ಸೇವೆಗಳು-090-ಸಚಿವಾಲಯ-01, ಕರ್ನಾಟಕ ಸರ್ಕಾರದ ಸಚಿವಾಲಯ-014 ಇ ತರೆ ಭತ್ಯೆಗಳು" ರಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 1345 ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರ) ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇ ಲಾಖೆ, (ಸೇವೆಗಳು-3)

**ವಿಷಯ:** ಶ್ರೀ ಎಂ.ಎಸ್.ನಟರಾಜಮೂರ್ತಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗ ೌರವಧನ ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 84 ಎಸ್‌ಇ ಎನ್ 2000, ದಿನಾಂಕ:23.2.2004.
2. ಶ್ರೀ ಎಂ.ಎಸ್.ನಟರಾಜಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಶನ್ಸ್ ನ್ಯಾಯಾಧೀಶರ ವರದಿ ದಿನಾಂಕ: 4.11.2004.

**ಪ್ರಸ್ತಾವನೆ:**

ಬೆಂಗಳೂರು ಜಿಲ್ಲಾ ಪಂಚಾಯತ್ ಇ ಂಜಿನಿಯರಿಂಗ್ ವಿಭಾಗದಲ್ಲಿ 1995-96ನೇ ಸಾಲಿನಲ್ಲಿ ಕಾರ್ಯಪಾಲಕ ಇ ಂಜಿನಿಯರ್ ಆಗಿ ಶ್ರೀ ಬಿ.ಶ್ರೀನಿವಾಸ್ (ನಿವೃತ್ತ) ಮುಖ್ಯ ಇ ಂಜಿನಿಯರ್, ಶ್ರೀ ವಿಶ್ವನಾಥಗೌಡ (ನಿ) ಪ್ರಥಮ ದರ್ಜೆ ಸಹಾಯಕರು ಹಾಗೂ ಇ ತರೆ 14 ಜನ ಲೆಕ್ಕಪತ್ರ ಇ ಲಾಖೆ ಅಧಿಕಾರಿ/ನೌಕರರು ಕಾರ್ಯನಿರ್ವಹಿಸುತ್ತಿದ್ದಾಗ, ಕೇಂದ್ರಪುರಸ್ಕೃತ ನೀರು ಸರಬರಾಜು ಯೋಜನೆಯ ರೂ. 52,89,740/- ಗಳ ಮೊತ್ತವನ್ನು ಸರ್ಕಾರದ ಅಥವಾ ಜಿಲ್ಲಾ ಪಂಚಾಯತಿಯ ಪೂರ್ವಾನುಮತಿ ಇ ಲ್ಲದೆ ರಾಜ್ಯ ವಲಯದ ನೀರು ಪೂರೈಕೆ ಯೋಜನೆ ಮತ್ತು ದಾಸ್ತಾನು ಖರೀದಿಗೆ ವೆಚ್ಚ ಮಾಡಿ ಕರ್ನಾಟಕ ಆರ್ಥಿಕ ಸಂಹಿತೆಯ ಸಲಹೆಗಳನ್ನು ಉಲ್ಲಂಘಿಸಿದ ದುರ್ನಡತೆ ಎಸಗಿದ ಆರೋಪಕ್ಕಾಗಿ ಅವರುಗಳ ವಿರುದ್ಧ ಇ ಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (1) ರಲ್ಲಿ ಓದಲಾದ ದಿನಾಂಕ: 21/23.2.2004 ಸರ್ಕಾರಿ ಆದೇಶದಲ್ಲಿ ಶ್ರೀ ಎಂ.ಎಸ್.ನಟರಾಜಮೂರ್ತಿ ನಿವೃತ್ತ ಜಿಲ್ಲಾ ನ್ಯಾಯಾಧೀಶ ಇ ವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ(2) ರಲ್ಲಿ ಓದಲಾದ ದಿನಾಂಕ: 4.11.2004 ರ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಈ ಸಂಬಂಧ ಅವರಿಗೆ ಗೌರವ ಧನ ಹಾಗೂ ವಾಹನಭತ್ಯೆ ಮಂಜೂರು ಮಾಡಲು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಸಿಆಸುಇ 84 ಎಸ್‌ಇ ಎನ್ 2000 ಬೆಂಗಳೂರು, ದಿನಾಂಕ: 1ನೇ ಡಿಸೆಂಬರ್ 2004**

ಸರ್ಕಾರವು ಶ್ರೀ ಎಂ.ಎಸ್.ನಟರಾಜಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಶನ್ಸ್ ನ್ಯಾಯಾಧೀಶರು, ಇ ವರು ವಿಚಾರಣಾ ವರದಿ ಸಲ್ಲಿಸಿದ ಕಾರಣ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಸೇಇ ವಿ 96, ದಿನಾಂಕ:24-4-1998 ರನ್ವಯ 5,000/- (ಐದು ಸಾವಿರ ರೂಪಾಯಿಗಳು ಮಾತ್ರ) ರೂಪಾಯಿಗಳ ಗೌರವ ಧನವನ್ನು ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇ ವಿ 2001, ದಿನಾಂಕ:4-3-2002 ರನ್ವಯ 1,000/-(ಒಂದು ಸಾವಿರ ರೂಪಾಯಿಗಳು ಮಾತ್ರ) ರೂಪಾಯಿಗಳ ವಾಹನ ಭತ್ಯೆಯನ್ನು ಇ ವರಿಗೆ ಪಾವತಿ ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ಬಗೆಗಿನ ವೆಚ್ಚವನ್ನು ಆಯವ್ಯಯದ ಲೆಕ್ಕ ಶೀರ್ಷಿಕೆ "2052 ಸಚಿವಾಲಯ ಸಾಮಾನ್ಯ ಸೇವೆಗಳು-090-ಸಚಿವಾಲಯ-01, ಕರ್ನಾಟಕ ಸರ್ಕಾರದ ಸಚಿವಾಲಯ-014 ಇ ತರೆ ಭತ್ಯೆಗಳು" ರಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 1346 ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರ) ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇ ಲಾಖೆ, (ಸೇವೆಗಳು-3)

**ವಿಷಯ:** ಶ್ರೀ ಭಕ್ತರಾಮೇಗೌಡ, ಕೆ.ಎ.ಎಸ್.ಅಧಿಕಾರಿಯವರಿಂದ ದಂಡನೆ ವಿಧಿಸಿ ಸರ್ಕಾರಿ ಆದೇಶದ ವಿರುದ್ಧ ಸನ್ಮಾನ್ಯ ರಾಜ್ಯಪಾಲರಿಗೆ ಮೇಲ್ಮನವಿ ಸಲ್ಲಿಕೆ ಹಾಗೂ ಮೇಲ್ಮನವಿ ವಜಾಮಾಡಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 71 ಎಸ್‌ಇ ಎನ್ 96 ದಿನಾಂಕ: 29.5.2003.
2. ಶ್ರೀ ಭಕ್ತರಾಮೇಗೌಡ ರವರ ದಿನಾಂಕ: 22.8.2003ರ ಮೇಲ್ಮನವಿ.

**ಪ್ರಸ್ತಾವನೆ:**

ಶ್ರೀ ಭಕ್ತರಾಮೇಗೌಡ ಕೆ.ಎ.ಎಸ್.ಅಧಿಕಾರಿಯವರು ತುಮಕೂರು ತಾಲ್ಲೂಕು ತಹಶೀಲ್ದಾರ್‌ರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಶ್ರೀಮತಿ ಬಿ.ಜಯಮಾಲ ಬಿನ್ ಸೀತಾರಾಮು ಎಂಬುವವರು ಅನುಸೂಚಿತ ಜಾತಿಗೆ ಸೇರಿದ್ದಾರೆಂದು ಸುಳ್ಳು ಪ್ರಮಾಣ ಪತ್ರ ನೀಡುವ ಮೂಲಕ ಪರಿಶಿಷ್ಟಜಾತಿಗೆ ಸೇರಿದ ಅಭ್ಯರ್ಥಿಗಳಿಗೆ ನ್ಯಾಯವಾಗಿ ದೊರಕಬೇಕಾದ ಮೀಸಲಾತಿ ಸೌಲಭ್ಯವನ್ನು ಅರ್ಹರಲ್ಲದವರು ಪಡೆಯುವುದಕ್ಕೆ ಅವಕಾಶ ಮಾಡಿಕೊಟ್ಟ ದುರ್ನಡತೆ ಎಸಗಿದ ಆರೋಪಕ್ಕಾಗಿ ಇ ಲಾಖಾ ವಿಚಾರಣೆ ನಡೆಸಿ ಅವರ ಮೇಲಿನ ಆರೋಪ ಸಾಬೀತಾದ್ದರಿಂದ ಮೇಲೆ (1)ರಲ್ಲಿ ಓದಲಾದ ದಿನಾಂಕ:29.5.2003ರ ಸರ್ಕಾರಿ ಆದೇಶದಲ್ಲಿ ಶ್ರೀ ಭಕ್ತರಾಮೇಗೌಡ ಕೆ.ಎ.ಎಸ್.ರವರ ಮುಂದಿನ ಎರಡು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರುವಂತೆ (with cumulative effect) ತಡೆಹಿಡಿಯಬೇಕೆಂದು ಆದೇಶಿಸಿ ದಂಡನೆ ವಿಧಿಸಲಾಗಿತ್ತು. ಈ ಬಗ್ಗೆ ಶ್ರೀ ಭಕ್ತರಾಮೇಗೌಡರವರು ಕೆ.ಸಿ.ಎಸ್.(ಸಿ.ಸಿ.ಎ.) ನಿಯಮಾವಳಿ

1957ರ ನಿಯಮ 18 ರಂತೆ ಸನ್ಮಾನ್ಯ ರಾಜ್ಯಪಾಲರಿಗೆ ಮೇಲ್ಮನವಿ ಸಲ್ಲಿಸಿ ತಮ್ಮ ಮೇಲೆ ವಿಧಿಸಿದ ದಂಡನೆಯನ್ನು ರದ್ದುಪಡಿಸಲು ಕೋರಿದ್ದಾರೆ. ಶ್ರೀಯುತರು ಸಲ್ಲಿಸಿದ ಮೇಲ್ಮನವಿ ಮತ್ತು ತತ್ಸಂಬಂಧ ಪರಿಶೀಲನಾ ಟಿಪ್ಪಣಿ ಈ ಕೆಳಕಂಡಂತಿದೆ.

| Points in the Appeal petition & Para No. | Remarks |
|---|---|
| Facts of the case | No comments |
| 1.The incident pertains to the year 1991. To be exact, it pertains to the caste certificate issued by this appellant on 20-12-1991, when this appellant was working as Tahshildar, Tumkur. In respect of this caste certificate, the show cause notice was issued on 07-11-2001 and the same was received by this appellant on 12.11.2001. Thus the inquiry was initiated after nearly a period of 10 years. | There is no bar under the Rules to initiate disciplinary action in so far as serving Government servants are concerned irrespective of the period of incidence. The appellant has admitted in the enquiry that the caste certificate was issued by him. All his other averments has been considered during the enquiry itself and rejected. |
| (A)(B) (C) (D) (E) (F) (G) to 2. Refered 7 different court cases and judgments. | All these reported cases does not absolve the appellant from his responsibility as the Head of the Office in issuing the false certificate. The proceedings in a Court of Law is not the same as in the departmental proceedings in a disciplinary matter. The standard and degree of proof required in the former cannot be insisted upon in the latter proceedings. Therefore, these cases are irrelevant to the incident the appellant is placed in. During the enquiry the appellant has not raised any objection about the deputing of the first witness who investigated the matter. Further the appellant has participated in the evidence and has merely countered the statement of witness stating that the investigating officer has not obtained the statements of his subordinate staff who are responsible for recommending the issue of certificate. The appellant has also challenged the inclusion of Additional Director General of Civil Enforcement as the witness, on the ground that such an authority has no knowledge of the case and thus incompetent witness etc., Hence his argument is full of ambiguity and not valid. |
| 3. Sri D.Doraiswamy had been deputed to give evidence on behalf of Additional Director General of Police. KCS (CCA) do not contemplate deputation of witness on somebodies behalf. | The witness Sri.D.Doraiswamy, Police Inspector who deposed on behalf of the first witness is from the same investigating agency who has personal knowledge of this case. |
| 4. The entire original file relating to the issue of the caste certificate is reported to be untraceable D.E.can not being initiated or held on basis of xerox copies. | This has been considered in the enquiry stage itself and his argument has been rejected. |
| 6. Appellant was denied and prevented from giving his defence statement on the evidence recorded. | This statement is false. The enquiry officer has narrated the details of the case diary particulars in his report also. |
| 7. Enquiry officer expects and requires the appellant to produce the relevant and necessary documented evidence but appellant cannot have records. | Since the appellant was the defendant in the enquiry, it was his responsibility to prove the charges are baseless. Regarding non availability of the original file this was a known fact since the commencement of the proceedings and thus has no relevance more so because the appellant has admitted that the certificate was issued by him. |

| Points in the Appeal petition & Para No. | Remarks |
|---|---|
| 8. All the concerned subordinate officials responsible for the issue of the caste certificate. They should also be involved in enquiry. | A Minor penalty imposed on the appellant itself is a fact of appreciation on the part of the disciplinary authority that the appellant himself was not solely responsible. |
| 9. Absence of original file is an handicap to appellant. | Reply above holds good. |
| 10.The disciplinary authority cannot follow pick and charge policy. | The connected file is not traceable as it was old and hence no responsibility could be fixed against others. Whereas the appellant having agreed to the issue of certificateby himself, was found lacking in his through examination before taking a decision. |
| 11. No departmental action taken against other 4 subordinate officials. | Reply in above paras holds good. |
| 12. For partly proved charge punish-ment is too harsh. | Reply in para (8) holds good. |
| 13. Whether it was possible or practicable for head of the office to go for spot verification. | Apart from the report of Village Accountant and Revenue Inspector the appellant should have insisted on the school certificate of the candidate which he has not done nor has he stated that he issued the certificate after verifying such a proof. Hence there is no force in his argument. |
| 14. Enquiry officer could not have come to the conclusion that this appellant have failed in his duties. | Considering the version of the witnesses or forming an opinion on the basis of available documents is left to the enquiry officer. Hence no comments. |
| 15. Entier enquiry proceedings were completed in one sitting. | It is for the enquiry officer to decide how many sittings be held and when to conclude the enquiry etc. |
| 16. Findings are not inaccordance with evidence on record. | This has been considered by the enquiry officer and rejected. |
| 17. No witness has attributed any ill motive to the appellant. | The action of the appellant may not have ill motive/malafide but is found to be negligent on his part. |
| 18. Disciplinary authority erred in accepting the erroneous partial findings and imposing harsh penalty. | The narrated precedent case is not similar to this case. Further no comparision can be made between one departmental enquiry to another departmental enquiry as each differs on charges, circumstances, gravity, evidence etc. Hence none of the grounds in the appeal warrants reconsideration of the penalty imposed on the appellant and thus liable to be rejected. |

ಮೇಲ್ಕಂಡ ವಾಸ್ತವಾಂಶಗಳನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 128 ಎಸ್‌ಇ ಎನ್ 2003 ಬೆಂಗಳೂರು, ದಿನಾಂಕ: 29ನೇ ನವೆಂಬರ್ 2004**

I have perused the Appeal submitted by Sri Bhaktaramegowda, KAS against the Orders of Government as disciplinary authority, imposing upon him a penalty of with-holding two annual increments with cumulative effect vide Government Order dated 29.05.2003. I have gone through the connected inquiry records and the appeal records. I find no merit in the contentions made by the appellant to modify the orders of the disciplinary authority. In view of the subsequent permission to the appellant to avail voluntary retirement, the Government Order imposing the penalty on the appellant does not survive, and the same is rendered infructuous.. Therefore, I dismiss the appeal filed by Sri Bhaktaramegowda not only for the reason of lack of merit but also for the reason that the Government order imposing penalty has become infructuous.

**T.N. CHATURVEDI**
Governor of Karnataka,
ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇ ಲಾಖೆ, (ಸೇವೆಗಳು-3)

ಪಿ.ಆರ್. 1347

**ತಿದ್ದುಪಡಿ ಸಂಖ್ಯೆ: ಸಿಆಸುಇ 22 ಆಸೇನಿ 2004, ಬೆಂಗಳೂರು, ದಿನಾಂಕ: 27ನೇ ನವೆಂಬರ್ 2004**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 22 ಆಸೇನಿ 2004, ದಿನಾಂಕ: 23.09.2004 ರಲ್ಲಿ ಕೆ.ಎ.ಎಸ್. (ಕಿ.ಶ್ರೇ) ಅಧಿಕಾರಿಗಳ ಪಟ್ಟಿಯ ಕ್ರಮ ಸಂಖ್ಯೆ: 2 ರಲ್ಲಿನ ಶ್ರೀಮತಿ ನಾಗರತ್ನಮ್ಮ, ಹಾಲಿ ಸಹಾಯಕ ಕಾರ್ಯದರ್ಶಿ, ಜಿಲ್ಲಾ ಪಂಚಾಯತ್, ಚಾಮರಾಜನಗರ, ಇವರ ಜನ್ಮ ದಿನಾಂಕ: ಮತ್ತು ನಿವೃತ್ತಿ ದಿನಾಂಕಗಳ ಬಗ್ಗೆ ಇರುವ ನಮೂದನೆಗಳನ್ನು ಅನುಕ್ರಮವಾಗಿ ದಿನಾಂಕ: 02.09.1947 ಮತ್ತು 30.09.2005 ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 1348 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ವಿಷಯ:** ಶ್ರೀ ಎಂ.ಕೃಷ್ಣ, ಕೆ.ಎ.ಎಸ್.(ಆಯ್ಕೆ ಶ್ರೇಣಿ) ಅಧಿಕಾರಿ ಅವರ ವಿರುದ್ಧದ ಇ ಲಾಖಾ ವಿಚಾರಣೆ-ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 57 ಎಸ್ಇ ಎನ್ 2002 ಬೆಂಗಳೂರು ದಿನಾಂಕ: 21.5.2003.
2. ಶ್ರೀ ಎಂ.ಎಸ್,ನಟರಾಜಮೂರ್ತಿ, ನಿವೃತ್ತ ನ್ಯಾಯಾಧೀಶರು ಅವರ ದಿನಾಂಕ: 3.3.2004ರ ವಿಚಾರಣಾ ವರದಿ.
3. 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ:ಸಿಆಸುಇ 57 ಎಸ್ಇ ಎನ್ 2002 ದಿನಾಂಕ:24.3.2004.

**ಪ್ರಸ್ತಾವನೆ:**

ಶ್ರೀ ಎಂ.ಕೃಷ್ಣ ಕೆ.ಎ.ಎಸ್. (ಆಯ್ಕೆ ಶ್ರೇಣಿ) ಅಧಿಕಾರಿ ಅವರನ್ನು ವಿಶೇಷ ಜಿಲ್ಲಾಧಿಕಾರಿಗಳು ಕೃಷ್ಣ ಮೇಲ್ದಂಡೆ ಯೋಜನೆ, ಬಾಗಲಕೋಟೆ ಜಿಲ್ಲೆಗೆ ವರ್ಗಾಯಿಸಿ ನೇಮಿಸಿದ್ದರೂ ಸಹ ನಿಗದಿತ ಅವಧಿಯಲ್ಲಿ ಸದರಿ ಹುದ್ದೆಗೆ ಹಾಜರಾಗದೆ ಅನಧಿಕೃತವಾಗಿ 8 ತಿಂಗಳುಗಳಿಗೂ ಮೇಲ್ಪಟ್ಟು ಗೈರು ಹಾಜರಾದ ಆರೋಪಕ್ಕಾಗಿ ಮೇಲೆ (1) ರಲ್ಲಿ ಓದಲಾದ ದಿನಾಂಕ:21.5.2003ರ ಸರ್ಕಾರಿ ಆದೇಶದಲ್ಲಿ ಇ ಲಾಖಾ ವಿಚಾರಣೆಯನ್ನು ಆದೇಶಿಸಿ ಶ್ರೀ ಎಂ.ಎಸ್.ನಟರಾಜಮೂರ್ತಿ, ನಿವೃತ್ತ ನ್ಯಾಯಾಧೀಶರು ಅವರನ್ನು ವಿಚಾರಣಾಧಿಕಾರಿಗಳಾಗಿ ನೇಮಿಸಲಾಯಿತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2) ರಲ್ಲಿ ಓದಲಾದ ದಿನಾಂಕ: 3.3.2004ರ ವಿಚಾರಣಾ ವರದಿ ಸಲ್ಲಿಸಿ ಈ ಕೆಳಕಂಡಂತೆ ವರದಿ ನೀಡಿರುತ್ತಾರೆ.

"ಆರೋಪಿಯು ತನ್ನ ಹೇಳಿಕೆಯಲ್ಲಿ ವರ್ಗಾವಣೆ ಆದೇಶ ಹೊರಡಿಸುವುದಕ್ಕೆ ಮುಂಚೆಯೆ ತಾನು ಅನಾರೋಗ್ಯದಿಂದ ಆಸ್ಪತ್ರೆಯಲ್ಲಿ ಇ ದ್ದುದಾಗಿ ತಿಳಿಸುತ್ತಾರೆ. ಆದರೆ ಯಾವ ವಿಧವಾದ ಖಾಯಿಲೆಗಾಗಿ, ಯಾವ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಪಡೆದರೆಂಬ ಬಗ್ಗೆ ಯಾವುದೇ ಉತ್ತರವನ್ನು ನೀಡಿಲ್ಲ. ತನ್ನ ಕುಟುಂಬದ ವೈದ್ಯರಿಂದ ಪ್ರಮಾಣಪತ್ರವನ್ನು ನೀಡಿದ್ದೇನೆಂದು ತಿಳಿಸಿದ್ದಾರೆ. ಇ ವರೆಗೆ ಕಳುಹಿಸಲಾದ ನೋಟೀಸ್‌ಗಳು ಸ್ವೀಕರಿಸಿಲ್ಲವೆಂದೂ ಊರಲ್ಲಿ ಇ ಲ್ಲ, ಬರುವುದು ಗೊತ್ತಿಲ್ಲ ಎಂಬ ಅಂಚೆ ಷರಾದೊಡನೆ ವಾಪಸ್ ಬಂದಿದೆ. ಅವರ ಪರವಾಗಿ ಶೀಘ್ರಲಿಪಿಗಾರ್ತಿಯೊಬ್ಬರು ಸಾಕ್ಷಿ ಹೇಳಿದರಾದರೂ ಅವರು ತಿಳಿಸಿದ ಲೇಕ್‌ಸೈಡ್ ನರ್ಸಿಂಗ್ ಹೋಂ ನಿಂದ ಯಾವುದೇ ಪತ್ರವನ್ನು ಒದಗಿಸಿಲ್ಲ. ಅನಂತರ ಅಧಿಕಾರಿಯು ಮಲ್ಲೇಶ್ವರಂ ಸರ್ಕಾರಿ ಆಸ್ಪತ್ರೆಯಲ್ಲಿನ ಸರ್ಜನ್ ನೀಡಿರುವ ಪ್ರಮಾಣ ಪತ್ರವನ್ನು ಹಾಜರುಪಡಿಸಿದ್ದು ಅದರಲ್ಲಿ ಖಾಯಿಲೆಯನ್ನು ವೈರಲ್ ಹೈಪಟೈಟಿಸ್ ಎಂದು ಬರೆದು ದಿನಾಂಕ: 22.10.2001 ರಿಂದ 7.7.2002ರ ವರೆಗಿನ ರಜೆಗೆ ಶಿಫಾರಸ್ಸು ಮಾಡಲಾಗಿದೆ. ಆರೋಪಿ ಪರ ಸಾಕ್ಷಿಯೂ ಸಹ ವಿರೋದಾಭಾಸದ ಹೇಳಿಕೆಗಳನ್ನು ನೀಡಿದ್ದಾರೆ. ಈ ಎಲ್ಲಾ ಕಾರಣಗಳಿಂದಾಗಿ ಹಾಗೂ ಶಿಸ್ತು ಪ್ರಾಧಿಕಾರದ ಪರ ಹಾಜರುಪಡಿಸಿದ ದಾಖಲೆ ಸಾಕ್ಷ್ಯಗಳ ಪರಿಶೀಲನೆಯಿಂದಾಗಿ ಶ್ರೀ ಎಂ.ಕೃಷ್ಣ ಕೆ.ಎ.ಎಸ್. ಅಧಿಕಾರಿ ಅವರ ವಿರುದ್ಧ ಆರೋಪ ಸಾಬೀತಾಗಿರುತ್ತದೆಂದು" ವಿಚಾರಣಾಧಿಕಾರಿಗಳ ವರದಿಯಲ್ಲಿ ತಿಳಿಸಿರುತ್ತಾರೆ.

ಮೇಲ್ಕಂಡ ವಿಚಾರಣಾ ವರದಿಯನ್ನು ಪರಿಶೀಲಿಸಲಾಯಿತು ಹಾಗೂ ಶ್ರೀ ಎಂ.ಕೃಷ್ಣ ಅವರಿಗೆ ಮೇಲೆ (3) ರಲ್ಲಿ ಓದಲಾದ ದಿನಾಂಕ: 24.3.2004 ರ ಎರಡನೇ ಕಾರಣ ಕೇಳುವ ನೋಟೀಸ್‌ನೊಡನೆ ವಿಚಾರಣಾ ವರದಿಯನ್ನು ಒದಗಿಸಿ ಈ ಬಗ್ಗೆ ಏನಾದರೂ ಅಹವಾಲು ಇ ದ್ದಲ್ಲಿ ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು. ಆದರೆ ಆರೋಪಿತ ಅಧಿಕಾರಿಯು ಉತ್ತರ ನೀಡಿರುವುದಿಲ್ಲ. ಆದುದರಿಂದ ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿಕೊಂಡ ಸರ್ಕಾರವು ದಂಡನೆ ವಿಧಿಸಲು ನಿರ್ಧರಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಕ್ರಮಾಂಕ: ಸಿಆಸುಇ 57 ಎಸ್ಇ ಎನ್ 2002, ಬೆಂಗಳೂರು, ದಿನಾಂಕ: 26ನೇ ನವೆಂಬರ್ 2004**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8 (iv-ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಂ.ಕೃಷ್ಣ, ಕೆ.ಎ.ಎಸ್. (ಆಯ್ಕೆ ಶ್ರೇಣಿ) ಅಧಿಕಾರಿ ಅವರ ವೇತನವನ್ನು ವೇತನ ಶ್ರೇಣಿ 11520-320-13440-380-14960-440-15840 ರಲ್ಲಿ ತಕ್ಷಣ ಜಾರಿಗೆ ಬರುವಂತೆ ಹಾಲಿ ಪಡೆಯುತ್ತಿರುವ ರೂ.13440 ರಿಂದ 2 ಹಂತ ಕೆಳಗೆ ಅಂದರೆ ರೂ.12,800/-ಕ್ಕೆ ಸಂಚಿತ ಪರಿಣಾಮ ಬೀರುವಂತೆ (with cumulative effect) 2 (ಎರಡು) ವರ್ಷಗಳ ಅವಧಿಗೆ ಇ ಳಿಸುವ ದಂಡನೆ ವಿಧಿಸಲಾಗಿದೆ. ಈ ಅವಧಿಯಲ್ಲಿ ಅವರ ವೇತನವು ಸ್ಥಿರವಾಗಿರುತ್ತದೆ. ಇ ವರು ವೇತನ ಬಡ್ತಿಗೆ ಅರ್ಹರಾಗುವುದಿಲ್ಲ. ಈ ದಂಡನಾವಧಿಯು ಮುಗಿದ ನಂತರ ದಂಡನೆಯು ಸಂಚಿತ ಪರಿಣಾಮ ಹೊಂದಿರುವುದರಿಂದ ಅವರ ವೇತನ ಬಡ್ತಿ ಮುಂದೂಡುವ ಪರಿಣಾಮ ಬೀರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 1349 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇ ಲಾಖೆ, (ಸೇವೆಗಳು-3)

**ವಿಷಯ:** ಫಾಸ್ಟ್ ಟ್ರ್ಯಾಕ್ ನ್ಯಾಯಾಲಯಗಳಿಗೆ ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಹೊಂದಿರುವ 5 ನಿವೃತ್ತ ಜಿಲ್ಲಾ ನ್ಯಾಯಾಧೀಶರ ಗುತ್ತಿಗೆ ಅವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಲಾ 369 ಎಲ್ಎಎಂ 2000, ದಿನಾಂಕ: 29.5.2001.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 48 ಎಚ್ಎಸ್‌ಸಿ 2001, ದಿನಾಂಕ: 6.8.2001.

3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 48 ಸೇಉನ್ಯಾ 2001, ದಿನಾಂಕ: 21.8.2001.
4. ರಿಜಿಸ್ಟ್ರಾರ್ ಜನರಲ್ ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಜಿಓಬಿ (1) 585:2000, ದಿನಾಂಕ: 23.7.2004.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಎರಡು ವರ್ಷಗಳಿಗಿಂತ ಹೆಚ್ಚಾಗಿ ಬಾಕಿ ಇರುವ ನ್ಯಾಯಾಲಯ ಪ್ರಕರಣಗಳನ್ನು ಶೀಘ್ರವಾಗಿ ಇತ್ಯರ್ಥಪಡಿಸಲು 11ನೇ ಆರ್ಥಿಕ ಆಯೋಗದ ಶಿಫಾರಸ್ಸಿನನ್ವಯ 13 ಫಾಸ್ಟ್ ಟ್ರ್ಯಾಕ್ ನ್ಯಾಯಾಲಯಗಳನ್ನು ರಾಜ್ಯದಲ್ಲಿ ವಿವಿಧ ಸ್ಥಳಗಳಲ್ಲಿ ಸ್ಥಾಪಿಸಲು ಮಂಜೂರಾತಿ ನೀಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಹೊಸದಾಗಿ ಸ್ಥಾಪಿಸಲಾದ ಫಾಸ್ಟ್ ಟ್ರ್ಯಾಕ್ ಕೋರ್ಟ್‌ಗಳಿಗೆ 13 ನಿವೃತ್ತ ಜಿಲ್ಲಾ ನ್ಯಾಯಾಧೀಶರುಗಳನ್ನು ಕರ್ನಾಟಕ ನಾಗರೀಕ ಸೇವೆ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 15 ರನ್ವಯ ಗುತ್ತಿಗೆ ಆಧಾರದ ಮೇಲೆ ಮಾಸಿಕ ರೂ.9,500 ಗಳ ಸಂಚಿತ ವೇತನದ ಮೇಲೆ ಪ್ರಥಮತ: 2 ವರ್ಷಗಳ ಅವಧಿಗೆ ಪ್ರಿಸೈಡಿಂಗ್ ಅಧಿಕಾರಿಗಳನ್ನಾಗಿ ನೇಮಿಸಲಾಗಿದೆ. ಹಾಗೂ ಮೇಲೆ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಈ ರೀತಿ ಗುತ್ತಿಗೆ ಆಧಾರದ ಮೇಲೆ ನೇಮಕಗೊಂಡ ಪ್ರಿಸೈಡಿಂಗ್ ಅಧಿಕಾರಿಗಳ ನೇಮಕಾತಿಯ ಬಗ್ಗೆ ಷರತ್ತು ಹಾಗೂ ನಿಬಂಧನೆಗಳನ್ನು ನಿಗದಿಪಡಿಸಲಾಗಿದೆ.

ಮೇಲೆ (4) ರಲ್ಲಿ ಓದಲಾದ ದಿನಾಂಕ: 23.7.2004ರ ಪತ್ರದಲ್ಲಿ ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ ಇವರು ಫಾಸ್ಟ್ ಟ್ರ್ಯಾಕ್ ನ್ಯಾಯಾಲಯಗಳಿಗೆ ಪ್ರಿಸೈಡಿಂಗ್ ಅಧಿಕಾರಿಗಳಾಗಿ ನೇಮಿಸಲಾಗಿದ್ದ ಈ ಕೆಳಕಂಡ 5 ಮಂದಿ ನಿವೃತ್ತ ನ್ಯಾಯಾಧೀಶರುಗಳ ಸೇವೆಯನ್ನು ದಿನಾಂಕ: 10.8.2004 ರಿಂದ 31.3.2005 ರವರೆಗೆ ಮುಂದುವರೆಸುವಂತೆ ಕೋರಿರುತ್ತಾರೆ.

1) ಶ್ರೀ ಪಿ. ಗೋಪಾಲಕೃಷ್ಣ, ಪ್ರಿಸೈಡಿಂಗ್ ಅಧಿಕಾರಿ, ಫಾಸ್ಟ್ ಟ್ರ್ಯಾಕ್ ನ್ಯಾಯಾಲಯ-1, ಬೆಂಗಳೂರು ನಗರ.
2) ಶ್ರೀ ಕೆ. ನಾಗಯ್ಯ ಶೆಟ್ಟಿ, ಪ್ರಿಸೈಡಿಂಗ್ ಅಧಿಕಾರಿ, ಫಾಸ್ಟ್ ಟ್ರ್ಯಾಕ್ ನ್ಯಾಯಾಲಯ-2, ಬೆಂಗಳೂರು ನಗರ.
3) ಶ್ರೀ ಶಂಕರ್ ಮುರಗೋಡ್, ಪ್ರಿಸೈಡಿಂಗ್ ಅಧಿಕಾರಿ, ಫಾಸ್ಟ್ ಟ್ರ್ಯಾಕ್ ನ್ಯಾಯಾಲಯ-1, ರಾಯಚೂರು.
4) ಶ್ರೀ ಕುಮಾರ್ ಗೌಡ, ಪ್ರಿಸೈಡಿಂಗ್ ಅಧಿಕಾರಿ, ಫಾಸ್ಟ್ ಟ್ರ್ಯಾಕ್ ನ್ಯಾಯಾಲಯ-1, ಬಳ್ಳಾರಿ.
5) ಶ್ರೀ ಎಸ್.ಪಿ. ಹನುಮಿನಹಾಳ್, ಪ್ರಿಸೈಡಿಂಗ್ ಅಧಿಕಾರಿ, ಫಾಸ್ಟ್ ಟ್ರ್ಯಾಕ್ ನ್ಯಾಯಾಲಯ-1, ಬೆಳಗಾಂ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 68 ಸೇಉನ್ಯಾ 2004, ಬೆಂಗಳೂರು, ದಿನಾಂಕ: 23ನೇ ನವೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಈ ಕೆಳಕಂಡ 5 ಪ್ರಿಸೈಡಿಂಗ್ ಅಧಿಕಾರಿಗಳ ಗುತ್ತಿಗೆ ಅವಧಿಯನ್ನು ದಿನಾಂಕ: 10.8.2004 ರಿಂದ 31.3.2005 ರವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಕರ್ನಾಟಕ ನಾಗರೀಕ ಸೇವೆ (ಸಾಮಾನ್ಯ ನೇಮಕಾತಿ) ನಿಯಮಾವಳಿ 1977ರ ನಿಯಮ 15 ರಡಿ ಮುಂದುವರೆಸಲಾಗಿದೆ.

1) ಶ್ರೀ ಪಿ. ಗೋಪಾಲಕೃಷ್ಣ, ಪ್ರಿಸೈಡಿಂಗ್ ಅಧಿಕಾರಿ, ಫಾಸ್ಟ್ ಟ್ರ್ಯಾಕ್ ನ್ಯಾಯಾಲಯ-1, ಬೆಂಗಳೂರು ನಗರ.
2) ಶ್ರೀ ಕೆ. ನಾಗಯ್ಯ ಶೆಟ್ಟಿ, ಪ್ರಿಸೈಡಿಂಗ್ ಅಧಿಕಾರಿ, ಫಾಸ್ಟ್ ಟ್ರ್ಯಾಕ್ ನ್ಯಾಯಾಲಯ-2, ಬೆಂಗಳೂರು ನಗರ.
3) ಶ್ರೀ ಶಂಕರ್ ಮುರಗೋಡ್, ಪ್ರಿಸೈಡಿಂಗ್ ಅಧಿಕಾರಿ, ಫಾಸ್ಟ್ ಟ್ರ್ಯಾಕ್ ನ್ಯಾಯಾಲಯ-1, ರಾಯಚೂರು.
4) ಶ್ರೀ ಕುಮಾರ್ ಗೌಡ, ಪ್ರಿಸೈಡಿಂಗ್ ಅಧಿಕಾರಿ, ಫಾಸ್ಟ್ ಟ್ರ್ಯಾಕ್ ನ್ಯಾಯಾಲಯ-1, ಬಳ್ಳಾರಿ.
5) ಶ್ರೀ ಎಸ್.ಪಿ. ಹನುಮಿನಹಾಳ್, ಪ್ರಿಸೈಡಿಂಗ್ ಅಧಿಕಾರಿ, ಫಾಸ್ಟ್ ಟ್ರ್ಯಾಕ್ ನ್ಯಾಯಾಲಯ-1, ಬೆಳಗಾಂ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 934 ವೆಚ್ಚ-7:2004, ದಿನಾಂಕ: 16:18.10.2004 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 1350 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

**ತಿದ್ದುಪಡಿ ಸಂಖ್ಯೆ: ಸಿಆಸುಇ 120 ಸೇಇಮು 2003(ಭಾ), ಬೆಂಗಳೂರು, ದಿನಾಂಕ: 22ನೇ ನವೆಂಬರ್ 2004**

ದಿನಾಂಕ: 12.07.2004ರ ಅಧಿಸೂಚನೆ ಸಂಖ್ಯೆ: ಸಿಆಸುಇ 120 ಸೇಇಮು 2003ರ 4ನೇ ಸಾಲಿನಲ್ಲಿ ದಿನಾಂಕ: “20.02.2003” ಎಂದಿರುವುದನ್ನು ದಿನಾಂಕ: “25.02.2003” ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 1351 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಎಂ.ಎಸ್. ಹುಸೇನ್, ಪಿಐ, ಸಿಸಿಬಿ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:**
1. ಅಡಿಷನಲ್ ಪೊಲೀಸ್ ಕಮೀಷನರ್ ಆಡಳಿತ ಮತ್ತು ಸಿಎಆರ್ ಬೆಂಗಳೂರು ರವರ ಅ.ಸಂ: 43 ಡಿಇ:ಆರ್.6:2000, ದಿನಾಂಕ: 6.4.2002.
2. ಪೋ.ಕ.ಬೆಂ. ನಗರ ರವರ ಅ.ಸಂಖ್ಯೆ: 33:ಅಪೀಲು:2002-03 ಓಬಿ 602:03, ದಿನಾಂಕ: 20.1.2003.
3. ಅರ್ಜಿದಾರರ ಮನವಿ ದಿನಾಂಕ: 8.5.2003.
4. ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರವರ ಪತ್ರ ಸಂಖ್ಯೆ: ಅಪೀಲು (8):12:2003-04, ದಿ: 10.6.2004.

**ಪ್ರಸ್ತಾವನೆ:**

ಶ್ರೀ ಎಂ.ಎಸ್. ಹುಸೇನ್, ಪಿ.ಐ. ಸಿಸಿಬಿ, ಬೆಂಗಳೂರು ನಗರ ರವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷಾರೋಪಕ್ಕಾಗಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡೆವಳಿ) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪ:-**

"ಶ್ರೀ ಎಂ.ಎಸ್. ಹುಸೇನ್, ಪಿ.ಐ. ಆದ ನೀವು ಜೆ.ಪಿ.ನಗರ ಠಾಣೆಯಲ್ಲಿ ಪಿ.ಐ. ಆಗಿ ಕೆಲಸ ಮಾಡುತ್ತಿದ್ದು ನೀವು ನಿಮ್ಮ ಠಾಣೆ ಸರಹದ್ದಿನಲ್ಲಿ ರೌಡಿಗಳ ಚಲನವಲನ ಚೆಕ್ ಮಾಡಿ ಅವರುಗಳನ್ನು ಹತೋಟಿಯಲ್ಲಿಡಬೇಕಾದ ಕೆಲಸ ಮಾಡಬೇಕಾಗಿತ್ತು. ಜೆ.ಪಿ.ನಗರ ಪೊಲೀಸ್ ಠಾಣೆಯ ಠಾಣಾಧಿಕಾರಿಯಾದ ನೀವು ನಿಮ್ಮ ಸರಹದ್ದಿನ ಸಮಾಜಘಾತಕ ವ್ಯಕ್ತಿಗಳ ಬಗ್ಗೆ ನಿಗಾವಹಿಸಿ ಅಂತಹ ಚಟುವಟಿಕೆಗಳು ನಡೆಯಬಾರದೆಂದು ಸೂಚನೆ ಇದ್ದರೂ ಸಹ ನೀನು ಕುಖ್ಯಾತ ರೌಡಿ ಸಂಜೀವನ ಚಟುವಟಿಕೆಯನ್ನು ತಡೆಯುವಲ್ಲಿ ವಿಫಲರಾಗಿರುತ್ತೀರಿ. ದಿನಾಂಕ: 11.11.2000 ರಂದು ರಾತ್ರಿ 11.30 ಗಂಟೆ ಸಮಯದಲ್ಲಿ ನಿಮ್ಮ ಠಾಣೆಯ ರೌಡಿ ಸಂಜೀವ ತನ್ನ ಸಹಚರರೊಂದಿಗೆ ಜರಗನಹಳ್ಳಿ ಕೃಷ್ಣಪ್ಪ ಎಂಬುವವರ ಮನೆಗೆ ಮಾರಕಾಸ್ತ್ರಗಳಿಂದ ಹೋಗಿ ಬಾಗಿಲು ಮುರಿದು ಮನೆಗೆ ಅತಿಕ್ರಮ ಪ್ರವೇಶ ಮಾಡಿ ಅವರಿಗೆ ಹೊಡೆದು ಗೃಹೋಪಕರಣಗಳನ್ನು ಜಖಂ ಮಾಡಿ, ಬೆಂಕಿ ಹಚ್ಚಿ, ಹಣ ದೋಚಿ ಅದೇ ಮನೆಯಲ್ಲಿ ಬಾಡಿಗೆಗೆ ಇದ್ದ ಇನ್ನಿತರ ಬಾಡಿಗೆ ಮನೆಗಳಿಗೂ ಜಖಂ ಮಾಡಿದ್ದು ಈ ಬಗ್ಗೆ ಜೆ.ಪಿ.ನಗರ ಪೊಲೀಸ್ ಠಾಣೆಯ ಕ್ರೈಂ ನಂ.658:2000 ಕಲಂ 443-145-148-427-436-307, 395-506(ಬಿ) ಐಪಿಸಿ ಪ್ರಕಾರ ಮೊಕದ್ದಮೆ ದಾಖಲಾಗಿರುತ್ತದೆ. ಸದರಿ ರೌಡಿ ಸಂಜೀವನ ವಿರುದ್ಧ ಅನೇಕ ಮೊಕದ್ದಮೆಗಳು ದಾಖಲಾಗಿದ್ದು ದಿನಾಂಕ: 2.7.2000 ರಂದು ಜೈಲಿನಿಂದ ಬಿಡುಗಡೆಯಾಗಿ ಆತನನ್ನು ಬಂಧಿಸಿ ಆತನ ವಿರುದ್ಧ ಮುಂಜಾಗ್ರತೆ ಕೇಸು ಹಾಕಲು ದಿನಾಂಕ: 2.11.2000 ರಂದು ನಿಮ್ಮ ಮೇಲಾಧಿಕಾರಿಗಳು ಸೂಚನೆ ನೀಡಿದ್ದರೂ ಸಹ ನೀವು ಆ ರೀತಿ ಮಾಡದೇ ಆತನ ವಿರುದ್ಧ ಕಾನೂನು ಕ್ರಮ ಕೈಗೊಳ್ಳದಿದ್ದುದರಿಂದ ಆತನು ದಿನಾಂಕ: 11.11.2000 ರಂದು ಮೇಲಿನಂತೆ ಕೃತ್ಯ ಮಾಡಿದ್ದು ನೀವು ಕರ್ತವ್ಯಲೋಪ ಬೇಜವಾಬ್ದಾರಿತನ ಹಾಗೂ ಮೇಲಾಧಿಕಾರಿಗಳ ಸೂಚನೆಗೆ ಅವಿಧೇಯತೆ ಪ್ರದರ್ಶಿಸಿದ್ದೀರಿ."

ಮೇಲ್ಕಂಡ ಆರೋಪದ ಬಗ್ಗೆ ಅರ್ಜಿದಾರರ ಸಮಜಾಯಿಷಿಯನ್ನೊಪ್ಪದ ಶಿಸ್ತು ಪ್ರಾಧಿಕಾರಿ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮವಾಗಿ 2 ವರ್ಷ ಕಾಲ ಮುಂದೂಡಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯಲ್ಲಿ ಸತ್ಯಾಂಶವಿಲ್ಲವೆಂದು ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅವರ ಮುಖ್ಯ ವಾದಾಂಶಗಳು ಈ ಕೆಳಕಂಡಂತಿವೆ.

1) ತನಗೆ ಶಿಕ್ಷೆ ವಿಧಿಸಿರುವ ಅಧಿಕಾರಿ ಸಕ್ಷಮ ಶಿಸ್ತು ಪ್ರಾಧಿಕಾರಿ ಅಲ್ಲ.
2) ಸಮಜಾಯಿಷಿ ಒಪ್ಪದಿರಲು ಸೂಕ್ತ ಶಿಸ್ತು ಪ್ರಾಧಿಕಾರಿ ತಿಳಿಸಿಲ್ಲ.
3) ಪೂರ್ವಗ್ರಹ ಪೀಡಿತರಾಗಿ ತನ್ನನ್ನು ಅಮಾನತ್ತಿನಲ್ಲಿರಿಸಿರುತ್ತಾರೆ.
4) ತನಗೆ ವಿಧಿಸಿರುವ ಶಿಕ್ಷೆ ಶಾಶ್ವತವಾಗಿ ತನ್ನ ವೇತನ ಮೊದಲಾದವುಗಳ ಮೇಲೆ ಪರಿಣಾಮ ಬೀರುವುದರಿಂದ ಕೆಸಿಎಸ್ ನಿಯಮ 59(1)(ಬಿ)ಗೆ ವಿರುದ್ಧವಾಗಿದೆ.
5) ಪೂರ್ವಭಾವಿ ವಿಚಾರಣೆ ನಡೆಸದೇ ಅಮಾನತ್ತಿನಲ್ಲಿರಿಸಿದ್ದು ನಿಯಮ ವಿರುದ್ಧವಾಗಿದೆ.
6) ಘಟನೆ ನಡೆದ ದಿನ ತಾನು ಸಿ.ಎಲ್. ರಜೆಯಲ್ಲಿದ್ದು ತಾನು ಕರ್ತವ್ಯದಲ್ಲಿಲ್ಲದ ದಿನದಂದು ನಡೆದ ಘಟನೆಗೆ ತನ್ನನ್ನು ಹೊಣೆಗಾರನಾಗಿಸುವುದು ಸೂಕ್ತವಲ್ಲ.

ಉಳಿದಂತೆ ವಾದಾಂಶಗಳು ಪುನರಾವರ್ತನೆಯಾಗಿದೆ.

ಅರ್ಜಿದಾರರಿಗೆ ಮೇಲಾಧಿಕಾರಿಗಳು ರೌಡಿ ಸಂಜೀವನ ಕುಕೃತ್ಯದ ಬಗ್ಗೆ ಚಲನವಲನದ ಬಗ್ಗೆ ಸಹಾ ಮಾಹಿತಿ ನೀಡಿ ಆತನನ್ನು ಮುಂಜಾಗ್ರತಾ ಕ್ರಮವಾಗಿ ಬಂಧಿಸಲು ದಿನಾಂಕ: 2.11.2000 ರಂದೇ ಸೂಚನೆ ನೀಡಿದ್ದರೂ ಸಹಾ ಬಂಧಿಸದೇ ದಿನಾಂಕ: 11.11.2000 ರಂದು ಘಟನೆ ನಡೆಯಲು ಅವಕಾಶ ನೀಡಿರುವುದು ದಾಖಲೆಗಳಿಂದ ಸ್ಪಷ್ಟವಾಗಿದೆ. ಅವರ ವಾರ್ಷಿಕ ವೇತನ ಬಡ್ತಿಯನ್ನು 2 ವರ್ಷ ಕಾಲ ಶಾಶ್ವತವಾಗಿ ಮುಂದೂಡುವ ಶಿಕ್ಷೆ ವಿಧಿಸಿರುವುದು ಕೆ.ಸಿ.ಎಸ್. ನಿಯಮಗಳಿಗೆ ಅನುಗುಣವಾಗಿಯೇ ಇದೆ. ಪೂರ್ವಭಾವಿ ವಿಚಾರಣೆ ನಡೆಸಲೇಬೇಕೆನ್ನುವ ನಿಯಮ ಇರುವುದಿಲ್ಲ. ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 349 ಡಿಜಿ 89 ಪ್ರಕಾರ ಡಿಐಜಿ ಮಟ್ಟದ ಅಧಿಕಾರಿ, ಪಿ.ಐ. ಮಟ್ಟದ ಅಧಿಕಾರಿಗೆ ಶಿಸ್ತು ಪ್ರಾಧಿಕಾರಿ ಆಗಿರುತ್ತಾರೆ. ಅರ್ಜಿದಾರರ ವಾದಾಂಶಗಳಲ್ಲಿ ಪರಿಗಣಿಸಬಹುದಾದ ಅಂಶಗಳಿಲ್ಲದೇ ಇರುವುದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 82 ಪೊಸಿಅಬ 2003, ಬೆಂಗಳೂರು, ದಿನಾಂಕ: 24ನೇ ನವೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡೆವಳಿ) ನಿಯಮಾವಳಿ 1965 ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಮಹಮ್ಮದ್ ಹುಸೇನ್, ಪಿ.ಐ. ಸಿ.ಸಿ.ಬಿ. ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ರಂಗಮಣಿ**
ಪಿ.ಆರ್. 1352 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ವೆಂಕಟೇಶ್ ಶೆಟ್ಟಿ, ಪಿಎಸ್ಐ, ಕಾ ಮತ್ತು ಸು. ತಿಲಕ್‌ನಗರ ಪೊಲೀಸ್ ಠಾಣೆ, ಬೆಂಗಳೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಡಿಸಿಪಿ, ದಕ್ಷಿಣ ವಿಭಾಗ ಬೆಂಗಳೂರು ರವರ ಅ.ಸಂ: ಇವಿ:7:52:ಡಿಸಿಪಿ(ದ)92, ಅ.ಸಂ.470:02, ದಿನಾಂಕ: 18.12.2002.
2. ಜಂಟೀ ಪೋ.ಕ. ಆಡಳಿತ ಮತ್ತು ಸಿಎಆರ್, ಬೆಂಗಳೂರು ನಗರ ರವರ ಅ.ಸಂ:73:ಅಪೀಲು:03 ಓಬಿ ಸಂ:803:04, ದಿನಾಂಕ: 19.4.2004.
3. ಅರ್ಜಿದಾರರ ಮನವಿ ದಿನಾಂಕ: 2.5.2004.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ರವರ ಪತ್ರ ಸಂ: ಅಪೀಲು (2) 46:2004, ದಿನಾಂಕ: 5.7.2004.

**ಪ್ರಸ್ತಾವನೆ:**

ಶ್ರೀ ವೆಂಕಟೇಶ್ ಶೆಟ್ಟಿ, ಪಿಎಸ್ಐ ಕಾನೂನು ಮತ್ತು ಸುವ್ಯವಸ್ಥೆ ತಿಲಕ್‌ನಗರ ಪೊಲೀಸ್ ಠಾಣೆ ಬೆಂಗಳೂರು ನಗರ ರವರ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷಾರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡೆವಳಿ) ನಿಯಮಾವಳಿ 1965ರ ನಿಯಮ 7 ರಡಿ ಶಿಸ್ತು ಕ್ರಮ ಜರುಗಿಸಲಾಗಿದೆ.

**ದೋಷಾರೋಪ:**

"ದಿನಾಂಕ: 23.9.2002 ರಂದು ಎಸಿಪಿ ರವರು ತಿಲಕ್‌ನಗರ ಠಾಣೆ ಪಿಎಸ್‌ಐ ನಿಮಗೆ ತನಿಖೆಯಲ್ಲಿ ಹೊಂದಿರುವ ಪ್ರಕರಣ ಕಡತಗಳನ್ನು ಪರಿಶೀಲನೆ ಮಾಡಿ ನೋಡಲಾಗಿ 1997ನೇ ಸಾಲಿನಿಂದ ಪ್ರಕರಣ ತನಿಖೆಯಲ್ಲಿರುವುದು ಕಂಡು ಬಂದಿದ್ದು ಹಲವಾರು ಪ್ರಕರಣಗಳಲ್ಲಿ ಪ್ರಕರಣ ದಿನಚರಿಯನ್ನು ಬರೆದಿರುವುದಿಲ್ಲ. 1997ನೇ ಸಾಲಿನಲ್ಲಿ ವರದಿಯಾಗಿರುವ ಮೊ.ಸಂ.257:97 ಪ್ರಕರಣಕ್ಕೆ ಇಲ್ಲಿಯವರೆಗೆ ಸಿಐ ನಂಬರ್ ಪಡೆದುಕೊಂಡಿರುವುದಿಲ್ಲ. 1998ನೇ ಸಾಲಿನಲ್ಲಿ ವರದಿಯಾಗಿರುವ ಮೊ.ಸಂ.503:98ರ ಪ್ರಕರಣದಲ್ಲಿ ಕಡತ ಎ.ಡಿ.ಪಿ. ಯವರಲ್ಲಿ ಇರುತ್ತದೆ. 1999ನೇ ಸಾಲಿನಲ್ಲಿ 3 ಪ್ರಕರಣ ತನಿಖೆಯಲ್ಲಿದ್ದು ಅವುಗಳು ಸಾಧಾರಣ ಪ್ರಕರಣಗಳಾಗಿದ್ದು ಇಲ್ಲಿಯವರೆಗೆ ತನಿಖೆ ಪೂರ್ಣಗೊಳಿಸಿಲ್ಲ. 2001ನೇ ಸಾಲಿಗೆ 25 ಪ್ರಕರಣಗಳ ತನಿಖೆಯಲ್ಲಿರುತ್ತೆ ವರ್ಷಾನುಗಟ್ಟಲೆ ಪ್ರಕರಣ ತನಿಖೆಯಲ್ಲಿಟ್ಟುಕೊಂಡು ಸಾಧಾರಣ ಪ್ರಕರಣಗಳನ್ನು ಸಹಾ ತನಿಖೆ ಮಾಡದೆ ಕರ್ತವ್ಯದಲ್ಲಿ ನಿರ್ಲಕ್ಷತೆ ಪ್ರದರ್ಶಿಸಿರುತ್ತೀರಿ".

ಮೇಲ್ಕಂಡ ಆರೋಪದ ಬಗ್ಗೆ ಅರ್ಜಿದಾರರು ನೋಟೀಸಿಗೆ ಸಮಜಾಯಿಷಿ ನೀಡದೇ ಇದ್ದುದರಿಂದ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ರಹಿತವಾಗಿ ಮುಂದೂಡಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರ ಕಳುಹಿಸಿದ ಮೇಲ್ಮನವಿಯನ್ನು ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಇಲಾಖಾ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದ್ದು, ಅವರ ಮುಖ್ಯ ವಾದಾಂಶಗಳು ಈ ಕೆಳಕಂಡಂತಿದೆ.

1) ತಮ್ಮ ತಾಯಿ ಪಾರ್ಶ್ವವಾಯು ಪೀಡಿತಳಾಗಿದ್ದುದರಿಂದ ಆಸ್ಪತ್ರೆಗೆ ದಾಖಲು ಮಾಡಿದ್ದು ಸಕಾಲದಲ್ಲಿ ಸಮಜಾಯಿಷಿ ನೀಡಲು ಆಗಲಿಲ್ಲ.

2) ಕಡತ ವಿಲೇ ವಾರಿಯನ್ನು ಸಂಪೂರ್ಣವಾಗಿ ಕಾರ್ಯಗತಗೊಳಿಸಿರುತ್ತೇನೆ.

ಅರ್ಜಿದಾರರು ಸಕಾಲದಲ್ಲಿ ಸಮಜಾಯಿಷಿ ನೀಡಿಲ್ಲವಾದ್ದರಿಂದ ಅವರ ಕರ್ತವ್ಯ ನಿರ್ಲಕ್ಷತೆಯನ್ನು ಎತ್ತಿ ತೋರಿಸುತ್ತದೆ ಅವರ ಮೇಲಿನ ಆರೋಪ ಕೆಲವು ಪ್ರಕರಣಗಳಲ್ಲಿ ತನಿಖಾ ಡೈರಿ ಬರೆದಿಲ್ಲ ಹಾಗೂ ಕೆಲವು ಪ್ರಕರಣಗಳಲ್ಲಿ ತನಿಖೆಯನ್ನು ನಡೆಸಿಲ್ಲ ಎನ್ನುವುದು ಪೊಲೀಸ್ ಇಲಾಖೆಯ ಅತಿ ಮುಖ್ಯವಾದ ಕರ್ತವ್ಯ ನಿರ್ವಹಣೆಯನ್ನು ಮಾಡುವಲ್ಲಿ ಅರ್ಜಿದಾರರು ವಿಫಲರಾಗಿದ್ದು, ಈ ಕರ್ತವ್ಯ ಲೋಪಕ್ಕೆ ಅವರಿಗೆ ವಿಧಿಸಿರುವ ಶಿಕ್ಷೆ ಸೂಕ್ತವಾಗಿದೆ ಎಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 112 ಪೊಸಿಅ 2004, ಬೆಂಗಳೂರು, ದಿನಾಂಕ: 24ನೇ ನವೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡೆವಳಿ) ನಿಯಮಾವಳಿ 1965 ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ವೆಂಕಟೇಶ್ ಶೆಟ್ಟಿ, ಪಿ.ಎಸ್.ಐ. ಕಾನೂನು ಮತ್ತು ಸುವ್ಯವಸ್ಥೆ, ತಿಲಕ್‌ನಗರ ಪೊಲೀಸ್ ಠಾಣೆ, ಬೆಂಗಳೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್. 1353 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಬಿ.ಸಿ. ಉಮಾಪತಿ, ಪಿಎಸ್‌ಐ, ಸಂಚಾರ-1, ಶಿವಮೊಗ್ಗ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಎಸ್.ಐ. ಶಿವಮೊಗ್ಗ ಜಿಲ್ಲೆ ರವರ ಅ.ಸಂ. (4) ಶಿಕ್ಷೆ:30:2001 ಓಬಿ ಸಂ.7:2000-01, ದಿನಾಂಕ: 7.4.2001.
2. ಐಜಿಪಿ, ಪೂರ್ವ ವಲಯ, ದಾವಣಗೆರೆ ರವರ ಹಿಂಬರಹ ಸಂ: ಅಪೀಲು (2) 18:2004 ದಿ: 16.4.2004.
3. ಅರ್ಜಿದಾರರ ಮನವಿ ದಿನಾಂಕ: 5.5.2004.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ರವರ ಪತ್ರ ಸಂ: ಅಪೀಲು (2) 38:2004, ದಿ: 30.8.04.

**ಪ್ರಸ್ತಾವನೆ:**

ಶ್ರೀ ಬಿ.ಸಿ. ಉಮಾಪತಿ, ಪಿಎಸ್‌ಐ, ಸಂಚಾರ-2 ಶಿವಮೊಗ್ಗ ಜಿಲ್ಲೆ ರವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷಾರೋಪಕ್ಕಾಗಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡೆವಳಿ) ನಿಯಮಾವಳಿ 1965ರ ನಿಯಮ 7 ರಡಿ ಶಿಸ್ತು ಕ್ರಮ ಜರುಗಿಸಲಾಗಿದೆ.

**ದೋಷಾರೋಪ:**

"ದಿನಾಂಕ: 2.3.2001 ರಂದು ಎಸ್.ಪಿ. ರವರು ಕುಂಸಿ ಪೊಲೀಸ್ ಠಾಣೆಗೆ ಹಠಾತ್ ಭೇಟಿ ನೀಡಿದ ಸಂದರ್ಭದಲ್ಲಿ ಅರ್ಜಿದಾರರು ಅವರ ಟೇಬಲ್ ಮೇಲೆ ಠಾಣೆಯಲ್ಲಿ ಸ್ವೀಕರಿಸಿಕೊಂಡ 31 ಅರ್ಜಿಗಳ ಬಗ್ಗೆ ಯಾವುದೇ ಕ್ರಮ ಕೈಗೊಳ್ಳದೇ ಅವುಗಳನ್ನು ಸ್ವೀಕರಿಸಿದ ಬಗ್ಗೆ ಸರಿಯಾಗಿ ನೋಂದಣಿ ಸಹ ಮಾಡದೇ ಕರ್ತವ್ಯದಲ್ಲಿ ನಿರ್ಲಕ್ಷತೆ, ಬೇಜವಾಬ್ದಾರಿತನ, ಕರ್ತವ್ಯ ಲೋಪ ಎಸಗಿದ ಬಗ್ಗೆ"

ಮೇಲ್ಕಂಡ ಆರೋಪದ ಬಗ್ಗೆ ಅರ್ಜಿದಾರರ ಸಮಜಾಯಿಷಿಯನ್ನೊಪ್ಪದ ಶಿಸ್ತು ಪ್ರಾಧಿಕಾರಿ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ರಹಿತವಾಗಿ 1 ವರ್ಷ ಕಾಲ ಮುಂದೂಡಿದ್ದು, ಇವರ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು "ಕಾಲ ವಿಳಂಬಿತ" ಅರ್ಜಿ ಎಂದು ಮೇಲೆ (2) ರಲ್ಲಿ ಓದಲಾದ ಹಿಂಬರಹ ನೀಡಿರುತ್ತಾರೆ.

ಈ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿದ್ದು ಎಸ್.ಪಿ. ರವರು ಹಠಾತ್ ಆಗಿ ತನ್ನ ಠಾಣೆಗೆ ಭೇಟಿ ನೀಡಿದ್ದಾಗ ತನ್ನ ಟೇಬಲ್ ಮೇಲೆ ಇದ್ದ ಅರ್ಜಿಗಳು ಠಾಣೆಯ ಹೊರಗಡೆ ಇತ್ಯರ್ಥಪಡಿಸಿಕೊಂಡಿದ್ದ ಪ್ರಕರಣಗಳು. ಆದ್ದರಿಂದ ತಾನು ರಿಜಿಸ್ಟರ್ ಮಾಡಿರುವುದಿಲ್ಲ ನಂತರ ದಾಖಲಿಸಿದ್ದೇನೆ ಎಂದು ವಾದಿಸಿರುತ್ತಾರೆ. ಆದರೆ ಮೇಲಾಧಿಕಾರಿ ಭೇಟಿ ನೀಡಿ ನಮೂದಿಸುವ ಮೊದಲೇ ರಿಜಿಸ್ಟರ್ ಮಾಡಿದ್ದರೇ ಕ್ರಮ ತೆಗೆದುಕೊಳ್ಳುವ ಅವಶ್ಯಕತೆ ಕಂಡು ಬರುವುದಿಲ್ಲ. ಅರ್ಜಿದಾರರು ಮನವಿಯಲ್ಲಿ ಕಾನೂನು ಬದ್ಧವಾದ ಅಂಶಗಳಿಲ್ಲದಿದ್ದು, ಅವರ ಕರ್ತವ್ಯ ನಿರ್ಲಕ್ಷ್ಯತೆಗೆ ವಿಧಿಸಿರುವ ಶಿಕ್ಷೆ ಸಮರ್ಪಕವಾಗಿದೆ ಎಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 105 ಪೊಸಿಅ 2004, ಬೆಂಗಳೂರು, ದಿನಾಂಕ: 24ನೇ ನವೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡೆವಳಿ) ನಿಯಮಾವಳಿ 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಬಿ.ಸಿ. ಉಮಾಪತಿ, ಪಿಎಸ್‌ಐ, ಸಂಚಾರ, ಶಿವಮೊಗ್ಗ ಜಿಲ್ಲೆರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್. 1354 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ದೊಡ್ಡಯ್ಯ, ಮಾಜಿ ಎಪಿಸಿ 2164 ಸಿಎಆರ್ (ಕೇಂದ್ರ) ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಅರ್ಜಿ ಬಗ್ಗೆ.

**ಓದಲಾಗಿದೆ:** 1. ಡಿಸಿಪಿ ಸಿಎಆರ್ (ಕೇಂದ್ರ) ಬೆಂಗಳೂರು ರವರ ಅ.ಸಂ.ಡಿ೪:51:2000 ಎ1 ಅಪು.ಸಂ.5:2002-03 ದಿ: 14.6.02

2. ಅಡಿಷನಲ್ ಪೋ.ಕ ಆಡಳಿತ ಮತ್ತು ಸಿಎಆರ್ ಬೆಂಗಳೂರು ರವರ ಅ.ಸಂ.28:ಅಪೀಲು:2002-03, ಅ.621102 ದಿನಾಂಕ: 31.12.2002.

3. ಅರ್ಜಿದಾರರ ಮನವಿ ದಿನಾಂಕ: 9.5.2003

4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ರವರ ಪತ್ರ ಸಂ:ಅಪೀಲು (2) 63:2002-03, ದಿ: 25.3.2004.

**ಪ್ರಸ್ತಾವನೆ:**

ಶ್ರೀ ದೊಡ್ಡಯ್ಯ ಮಾಜಿ ಪಿಸಿ 2164, ಸಿಎಆರ್ (ಕೇಂದ್ರ) ಬೆಂಗಳೂರು ರವರ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ವಿರುದ್ಧ ಈ ಕೆಳಕಂಡ ದೋಷಾರೋಪಕ್ಕೆ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡೆವಳಿ) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪ:**

"ಪಿಸಿ 2164, ದೊಡ್ಡಯ್ಯ 'ಸಿ' ವಿಭಾಗ ಸಿಎಆರ್ (ಕೇಂದ್ರ) ಬೆಂಗಳೂರು ಆದ ನೀವು 7.1.2001 ರಿಂದ 25.2.2001 ರವರೆಗೆ 50 ದಿನಗಳ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಕರ್ತವ್ಯದಲ್ಲಿ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನವನ್ನು ತೋರಿಸಿರುತ್ತೀರಿ. ನೀವು ಈ ಹಿಂದೆ ನಿಮ್ಮ ಸೇವಾ ಅವಧಿಯಲ್ಲಿ ಫೆಬ್ರವರಿ 1994 ರಿಂದ ಡಿಸೆಂಬರ್ 2000 ರವರೆವಿಗೆ ಸುಮಾರು 40 ಬಾರಿ ಗೈರು ಹಾಜರಾಗಿರುತ್ತೀರಿ. ಸುಮಾರು 6 ಬಾರಿ ನಿಮ್ಮ ಗೈರುಹಾಜರಿ ಅವಧಿಯನ್ನು ರಜೆಯನ್ನಾಗಿ ಮಾಡಿರುತ್ತಾರೆ. ಉಳಿದ ಅವಧಿಯನ್ನು ಸಂಬಳರಹಿತ ರಜೆಯನ್ನಾಗಿ ಮಾಡಿರುತ್ತಾರೆ. ಆದರೆ ನಿಮಗೆ ಎಷ್ಟೇ ಅವಕಾಶ ನೀಡಿದರೂ ನೀವು ಯಾವುದೇ ರೀತಿಯ ಸುಧಾರಣೆ ತೋರಿಲ್ಲ ನೀವು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯಕ್ಕೆ ಗೈರುಹಾಜರಾಗುವ ಮುಂಚಿ ನಿಮ್ಮ ಮೇಲಾಧಿಕಾರಿಗಳಿಗೆ ಯಾವುದೇ ರೀತಿಯ ಮಾಹಿತಿಯನ್ನು ನೀಡದೇ ರಜೆ ಅರ್ಜಿ ಸಲ್ಲಿಸದೆ ಅಥವಾ ನಿಮಗೆ ಯಾವುದೇ ವೈದ್ಯಕೀಯ ಚಿಕಿತ್ಸೆ ಬೇಕಾದಲ್ಲಿ ಎಂ.ಹೆಚ್.ಎನ್. ಪಡೆದು ಸಿಕ್ ರಜೆಯಲ್ಲಿ ಅಥವಾ ರಜೆಯನ್ನು ತೆಗೆದುಕೊಂಡು ಹೋಗಬಹುದಿತ್ತು. ಆದರೆ ನೀವು ಆ ರೀತಿ ಮಾಡದೇ ಇದಕ್ಕಿದ್ದಂತೆ, ಕರ್ತವ್ಯಕ್ಕೆ ಗೈರುಹಾಜರಾಗಿ ನಿಮ್ಮ ಅಶಿಸ್ತನ್ನು ಪ್ರದರ್ಶಿಸಿರುತ್ತೀರಿ. ಈ ರೀತಿ ನಿಮ್ಮ ವರ್ತನೆಯನ್ನು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಇತರೆ ಪೊಲೀಸ್ ಸಿಬ್ಬಂದಿಗಳ ಮೇಲೆಯೂ ಸಹ ದುಷ್ಪರಿಣಾಮ ಬೀರುವುದಾಗಿದೆ."

ಮೇಲ್ಕಂಡ ಆರೋಪ ಇಲಾಖಾ ವಿಚಾರಣೆಯಲ್ಲಿ ಸಾಬೀತಾದ್ದರಿಂದ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿದ್ದು, ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿ ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ತಿರಸ್ಕೃತವಾಗಿದೆ.

ಈ ಎರಡೂ ಆದೇಶದ ವಿರುದ್ಧ ಸಲ್ಲಿಸಿದ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದ್ದು ಅದರ ಮುಖ್ಯ ವಾದಾಂಶಗಳು ಈ ಕೆಳಕಂಡಂತಿವೆ.

1) ತಾನು ತೀರ ಬಡವನಾಗಿದ್ದು ಪೊಲೀಸ್ ಗೆಳೆಯರ ಸಹಾಯ ಪಡೆಯಲು ನೀಡುವ ಪರಿಸ್ಥಿತಿಯಲ್ಲಿಲ್ಲದ ತಮ್ಮ ತಪ್ಪನ್ನು ಒಪ್ಪಿಕೊಂಡಿದ್ದೆ.

2) ಪೊಲೀಸ್ ಗೆಳೆಯರು ಇಲ್ಲದ ಕಾರಣ ಸಾಕ್ಷಿಗಳನ್ನು ಕ್ರಾಸ್ ಎಕ್ಸಾಮಿನೇಷನ್ ಮಾಡಲಾಗಿಲ್ಲ.

3) ತನಗೆ ತೀವ್ರ ಅನಾರೋಗ್ಯ ಉಂಟಾದರಿಂದಲೇ ಗೈರುಹಾಜರಾಗಿದ್ದು ಮೆಡಿಕಲ್ ಸರ್ಟಿಫಿಕೇಟ್ ಕೊಟ್ಟರೂ ಸಹ ಅದನ್ನು ಮಾನ್ಯ ಮಾಡಿಲ್ಲ.

4) ತಾನು ಗೈರುಹಾಜರಾಗಿರುವುದಕ್ಕೆ ಆಗಿಂದಾಗ್ಗೆ ರಜೆ ಮಂಜೂರು ಮಾಡಿರುತ್ತಾರೆ. ಅದಾಗ್ಯೂ ಅವುಗಳನ್ನು ಪುನಃ ನಮೂದಿಸಿರುವುದು ಸರಿಯಲ್ಲ.

5) ತನ್ನನ್ನು ಕೆಲಸದಿಂದ ತೆಗೆದು ಹಾಕಿರುವುದು ತನ್ನ ಕುಟುಂಬ ಬೀದಿಪಾಲಾಗಿದೆ.

ಅರ್ಜಿದಾರರ ವಾದಾಂಶಗಳಲ್ಲಿ ಅವರ ಮೇಲಿನ ಆಪಾದನೆಯನ್ನು ಅಲ್ಲಗೆಳೆಯವಂತಹ ಯಾವುದೇ ವಾದಾಂಶಗಳನ್ನು ಸಹ ಮಂಡಿಸಿರುವುದಿಲ್ಲ. ಅರ್ಜಿದಾರರು ತಮಗೆ ಖಾಯಿಲೆಯಾಗಿದ್ದರೇ ಎಂಹೆಚ್ಎಸ್ ಪಡೆದು ಸಕ್ಷಮ ಪ್ರಾಧಿಕಾರಿಯ ಅನುಮತಿ ಪಡೆದು ಹೋಗಬಹುದಿತ್ತು. ಅರ್ಜಿದಾರರು ಗೈರುಹಾಜರಿ ಆಗುವ ಪ್ರವೃತ್ತಿಯನ್ನು ಬೆಳೆಸಿಕೊಂಡಿದ್ದು, ಶಿಸ್ತಿನ ಇಲಾಖೆಯಲ್ಲಿ ಇಂತಹ ಪ್ರವರ್ತನೆ ಸರಿಯಲ್ಲ. ಇವರ ಮನವಿಯನ್ನು ಪುರಸ್ಕರಿಸಲು ಯಾವುದೇ ಸಮರ್ಥನೆ ಇರುವುದಿಲ್ಲ. ಆದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 145 ಪೊಸಿಅ 2003, ಬೆಂಗಳೂರು, ದಿನಾಂಕ: 22ನೇ ನವೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡೆವಳಿ) ನಿಯಮಾವಳಿ 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ದೊಡ್ಡಯ್ಯ ಮಾಜಿ ಎಪಿಸಿ 2164 ಸಿಎಆರ್ (ಕೇಂದ್ರ) ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್. 1355 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಎಂ.ಎಂ. ಕೋಲ್ಕರ್ ಪಿಸಿ 77, 9ನೇ ಪಡೆ ಕೆಎಸ್ಆರ್‌ಪಿ ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಅರ್ಜಿ ಬಗ್ಗೆ.

**ಓದಲಾಗಿದೆ:** 1. ಕಮಾಂಡೆಂಟ್, 9ನೇ ಪಡೆ, ಕೆಎಸ್ಆರ್‌ಪಿ ಬೆಂಗಳೂರು ರವರ ಅ.ಸಂ: ಇ.ವಿ.14:2000-01, ದಿ: 24.6.2002.

2. ಡಿಐಜಿ, ಕೆಎಸ್ಆರ್‌ಪಿ, ಬೆಂಗಳೂರು ರವರ ಅ.ಸಂ: ಅಪೀಲು 55:2001-02, ದಿನಾಂಕ: 13.10.2003.

3. ಅರ್ಜಿದಾರರ ಮನವಿ ದಿನಾಂಕ: 7.10.2004.

4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ರವರ ಪತ್ರ ಸಂ: ಅಪೀಲು (2) 27:2004, ದಿ: 19.8.04.

**ಪ್ರಸ್ತಾವನೆ:**

ಶ್ರೀ ಎಂ.ಎಂ. ಕೋಲ್ಕರ್, ಪಿಸಿ 77, 9ನೇ ಪಡೆ, ಕೆಎಸ್‌ಆರ್‌ಪಿ, ಬೆಂಗಳೂರು ರವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷಾರೋಪಕ್ಕಾಗಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡೆವಳಿ) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪ:**

"ನೀವು ಮೇಲೆ ಮಹದೇಶ್ವರ ಬೆಟ್ಟದಲ್ಲಿ ದಿನಾಂಕ: 9.1.2001 ರಿಂದ ವಿಶೇಷ ಕಾರ್ಯಾಚರಣೆ (ಎಸ್‌ಟಿಎಫ್) ಪಡೆಯಲ್ಲಿ ಕರ್ತವ್ಯ ನಿರ್ವಹಿಸಲು ನೇಮಕಗೊಂಡು ಕರ್ತವ್ಯ ನಿರ್ವಹಿಸುವ ಸಮಯದಲ್ಲಿ ದಿನಾಂಕ: 23.4.2001 ರಿಂದ ...5.2001ರ ವರೆಗೆ 16 ದಿನಗಳು ಮತ್ತು ದಿನಾಂಕ: 21.6.2001 ರಿಂದ 7.10.2001ರ ವರೆಗೆ 109 ದಿವಸಗಳು ಒಟ್ಟು 125 ದಿವಸಗಳು ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿರುವ ಮೂಲಕ ಕರ್ತವ್ಯದಲ್ಲಿ ನಿರ್ಲಕ್ಷ್ಯತನ, ಅಶಿಸ್ತು ಮತ್ತು ದುರ್ನಡತೆ ಪ್ರದರ್ಶಿಸಿರುವುದು"

ಮೇಲ್ಕಂಡ ಆರೋಪವು ಇಲಾಖಾ ವಿಚಾರಣೆಯಲ್ಲಿ ನಿಸ್ಸಂದೇಹವಾಗಿ ಸಾಬೀತಾದ್ದರಿಂದ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರ ಮುಂದಿನ 3 ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮವಾಗಿ ಮುಂದೂಡಿರುತ್ತದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದ್ದು ಅವರು ತಮ್ಮ ಮೇಲಿನ ಆಪಾದನೆಯನ್ನು ಅಲ್ಲಗಳೆಯವಂತಹ ಯಾವುದೇ ವಾದಾಂಶಗಳನ್ನು ಮಂಡಿಸಿರುವುದಿಲ್ಲ. ತಮ್ಮ ಖಾಯಿಲೆಯ ಬಗ್ಗೆ ಯಾವುದೇ ಎಂ.ಹೆಚ್.ಎಸ್. ಪಡೆದಿರುವುದಿಲ್ಲ. ತಮ್ಮ ಖಾಯಿಲೆಗೆ ಸೂಕ್ತ ಸಮರ್ಥನೆ ನೀಡಿರುವುದಿಲ್ಲ. ಅವರ ಮನವಿಯಲ್ಲಿ ಪರಿಗಣಿಸಬಹುದಾದ ಅಂಶಗಳಿಲ್ಲದೇ ಇರುವುದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 80 ಪೊಸಿಅ 2004, ಬೆಂಗಳೂರು, ದಿನಾಂಕ: 24ನೇ ನವೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡೆವಳಿ) ನಿಯಮಾವಳಿ 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಂ.ಎಂ. ಕೋಲ್ಕರ್, ಪಿಸಿ 77, 9ನೇ ಪಡೆ, ಕೆಎಸ್‌ಆರ್‌ಪಿ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಆರ್. ರಂಗಮಣಿ

ಪಿ.ಆರ್. 1356 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ಆರ್ಥಿಕ ಸಚಿವಾಲಯ**

**ವಿಷಯ:** ಶ್ರೀ ಎಸ್. ದಿನೇಶ್ ಕುಮಾರ್, ವಾಣಿಜ್ಯ ತೆರಿಗೆ ಪರಿವೀಕ್ಷಕರು, ಇವರ ವಿರುದ್ಧ ಶಿಸ್ತಿನ ಕ್ರಮದ ಬಗ್ಗೆ.

**ಓದಲಾಗಿದೆ:**
1. ನಿಬಂಧಕರು, ಕರ್ನಾಟಕ ಲೋಕಾಯುಕ್ತ ಇವರ ಪತ್ರ ದಿನಾಂಕ 11.6.99.
2. ಸರ್ಕಾರದ ಆದೇಶ ಸಂಖ್ಯೆ:ಆಇ 160 ವಾತೆಸಿ 99 ದಿ:1.4.2000.
3. ಕರ್ನಾಟಕ ಲೋಕಾಯುಕ್ತರ ಪತ್ರ ಸಂಖ್ಯೆ:ಎಲ್‌ಓಕೆ/ಎಆರ್‌ಇ–4/ಈಎನ್‌ಕ್ಯೂ–28/2002–03 ದಿನಾಂಕ 29.7.2003 ಹಾಗೂ 3.9.2003.
4. ಎರಡನೇ ಕಾರಣ ಕೇಳುವ ನೋಟೀಸ್ ಸಂಖ್ಯೆ:ಆಇ 160 ವಾತೆಸಿ 99, ದಿನಾಂಕ: 26.9.2003.
5. ಶ್ರೀ ದಿನೇಶ್ ಕುಮಾರ್, ಇವರ ಸಮಜಾಯಿಷಿ ದಿ:11.11.2003.

**ಪ್ರಸ್ತಾವನೆ:**

ಮೇಲಿನ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ನಿಬಂಧಕರು, ಕರ್ನಾಟಕ ಲೋಕಾಯುಕ್ತ ಇವರ ಪತ್ರ ದಿನಾಂಕ: 11–6–99 ರಲ್ಲಿ ಕರ್ನಾಟಕ ಉಪ ಲೋಕಾಯುಕ್ತರ ತನಿಖಾ ವರದಿಯನ್ನು ಕಳುಹಿಸಿದ್ದು, ಸದರಿ ವರದಿಯಲ್ಲಿ ಶ್ರೀ ಎಸ್.ದಿನೇಶ್ ಕುಮಾರ್, ವಾಣಿಜ್ಯ ತೆರಿಗೆ ಪರಿವೀಕ್ಷಕರು (ಆಪಾದಿತ ನೌಕರ–1) ಹಾಗೂ ಎನ್.ಎ.ಬಾಲಚಂದ್ರ, ವಾಹನ ಚಾಲಕ (ಆಪಾದಿತ ನೌಕರ–2) ಇವರುಗಳು ಮೈಸೂರಿನ ವಾಣಿಜ್ಯ ತೆರಿಗೆ ಅಧಿಕಾರಿ ಕಛೇರಿ, ವಸೂಲಿ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಮಾಲೀಕರು, ಮೆ:ಜಯರಾಂ ಮುರುಗನ್ ಫರ್ನಿಚರ್ಸ್, ಮೈಸೂರು, ಇವರಿಂದ ಕಾರ್ಖಾನೆಯ ಯಂತ್ರೋಪಕರಣಗಳಿಗೆ ಹಾಕಿದ್ದ ಬೀಗ ಮುದ್ರೆಯನ್ನು ತೆಗೆಯಲು ರೂ.1,000–00ಗಳ ಅಕ್ರಮ ಸಂಭಾವನೆಯನ್ನು ನೀಡಬೇಕೆಂದು ಶ್ರೀ ದಿನೇಶ್ ಕುಮಾರ್‌ರವರು ಒತ್ತಾಯಿಸಿದ್ದು, ದಿನಾಂಕ:9–7–93 ರಂದು ಫಿರ್ಯಾದಿಯಿಂದ ಶ್ರೀ ಎನ್.ಎ.ಬಾಲಚಂದ್ರ ಇವರು ಕಾರ್ಖಾನೆಯ ಕಛೇರಿಯಲ್ಲಿ ಮಧ್ಯವರ್ತಿಯಾಗಿ ಸ್ವೀಕರಿಸುವಾಗ ಲೋಕಾಯುಕ್ತ ಪೊಲೀಸರು ಬೀಸಿದ ಬಲೆಗೆ ಸಿಕ್ಕಿಬಿದ್ದಿರುತ್ತಾರೆಂದು ಮತ್ತು ಆಪಾದಿತ ನೌಕರರ ವಿರುದ್ಧ ಫಿರ್ಯಾದುದಾರರ ದೂರಿನಂತೆ ಲಂಚನಿರ್ಮೂಲನಾ ಕಾಯ್ದೆ 1988ರ ಪ್ರಕಾರ ಕ್ರಿಮಿನಲ್ ಮೊಕದ್ದಮೆ ದಾಖಲುಮಾಡಿರುವುದಾಗಿ ತಿಳಿಸಿದ್ದರು. ತನಿಖೆಯ ಸಮಯದಲ್ಲಿ ಸಂಗ್ರಹಿಸಲಾದ ಮಾಹಿತಿಗಳನ್ವಯ ಆಪಾದಿತ ನೌಕರರು ಅನುಕೂಲಕರ ಕೆಲಸ ಮಾಡುವುದಾಗಿ ಫಿರ್ಯಾದುದಾರರಿಂದ ಅಕ್ರಮ ಸಂಭಾವನೆ ಪಡೆಯುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಮತ್ತು ಆಪಾದಿತ ನೌಕರರಿಗೆ ಈ ಬಗ್ಗೆ ಕಾರಣ ಕೇಳುವ ನೋಟೀಸನ್ನು ನೀಡಿದ್ದು, ಅದನ್ನು ಪರಿಶೀಲಿಸಲಾಗಿದ್ದು, ಆಪಾದಿತ ನೌಕರರು ನೀಡಿರುವ ಸಮಜಾಯಿಷಿಯು ತೃಪ್ತಿಕರವಾಗಿಲ್ಲ ವಾದ್ದರಿಂದ ಅದನ್ನು ತಿರಸ್ಕರಿಸಿ, ಕರ್ನಾಟಕ ಲೋಕಾಯುಕ್ತ ಕಾಯ್ದೆ 1984ರ ಸೆಕ್ಷನ್ 12(3)ರ ಪ್ರಕಾರ ಆಪಾದಿತರ ಮೇಲೆ ಕಠಿಣ ದಂಡನೆಯನ್ನು ವಿಧಿಸಲು ಶಿಸ್ತು ಕ್ರಮವನ್ನು ನಿಯಮಾನುಸಾರ ಕೈಗೊಳ್ಳಲು ಉಪ ಲೋಕಾಯುಕ್ತರು ಶಿಫಾರಸ್ಸು ಮಾಡಿದ್ದರು.

ಈ ಶಿಫಾರಸ್ಸನ್ನು ಪರಿಗಣಿಸಿದ ಸರ್ಕಾರವು ಸದರಿ ನೌಕರರ ವಿರುದ್ಧ ಮಾಡಲಾದ ಆಪಾದನೆಯು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಮತ್ತು ಈ ಆಪಾದನೆಯು ಗಂಭೀರ ಸ್ವರೂಪವಾಗಿದ್ದರಿಂದ, ಈ ಇಬ್ಬರು ಆಪಾದಿತ ನೌಕರರುಗಳ ವಿರುದ್ಧ ಇಲಾಖಾ ವಿಚಾರಣೆಯನ್ನು ಕೈಗೊಳ್ಳಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 14(ಎ) ರಡಿಯಲ್ಲಿ ಇಲಾಖಾ ತನಿಖೆಯನ್ನು ಕರ್ನಾಟಕ ಉಪ ಲೋಕಾಯುಕ್ತರಿಗೆ ವಹಿಸಿ, ಮೇಲ್ಕಾಣಿಸಿದ ನಿಯಮಾವಳಿಗಳ ನಿಯಮ 11ರಡಿಯಲ್ಲಿ ಶಿಸ್ತು ಕ್ರಮ ಜರುಗಿಸಲು ದಿನಾಂಕ:1–4–2000 ದಂದು ಸರ್ಕಾರವು ಆದೇಶ ಹೊರಡಿಸಿತ್ತು.

ಮೇಲ್ಕಂಡ ಆದೇಶಾನುಸಾರ, ಹೆಚ್ಚುವರಿ ನಿಬಂಧಕರು (ತನಿಖೆಗಳು–4) ಕರ್ನಾಟಕ ಲೋಕಾಯುಕ್ತ ಇವರು ವಿಚಾರಣೆಯನ್ನು ನಡೆಸಿ, ದಿನಾಂಕ: 29–7–2003 ರಂದು ವರದಿಯನ್ನು ಕಳುಹಿಸಿದ್ದು, ಸದರಿ ವಿಚಾರಣಾ ವರದಿಯ ಮೇಲೆ ಕರ್ನಾಟಕ ಲೋಕಾಯುಕ್ತರು ತಮ್ಮ ಪತ್ರ ದಿನಾಂಕ: 3–9–2003 ರಲ್ಲಿ ಶ್ರೀ ಎಸ್.ದಿನೇಶ್ ಕುಮಾರ್, ವಾಣಿಜ್ಯ ತೆರಿಗೆ ಪರಿವೀಕ್ಷಕರು, ಇವರ ಮೇಲೆ ಹೊರಿಸಲಾದ ಆರೋಪಗಳು ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ, ಕ.ಸಿ.ಸೇ.(ಸಿ.ಸಿ.ಎ.) ನಿಯಮಾವಳಿ, 1957ರ ನಿಯಮ–8(viii)ರ ರೀತ್ಯ ಇವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡುವ ಕಠಿಣ ದಂಡನೆಯನ್ನು ವಿಧಿಸಲು ಶಿಫಾರಸ್ಸು ಮಾಡಿರುವರು. ಇನ್ನೊಬ್ಬ ಆಪಾದಿತ ನೌಕರರಾದ ಎನ್.ಎ.ಬಾಲಚಂದ್ರ, ವಾಹನ ಚಾಲಕ, ಇವರ ವಿರುದ್ಧ ಹೊರಿಸಲಾದ ಆರೋಪಗಳು ವಿಚಾರಣೆಯಲ್ಲಿ ಸಾಭೀತಾಗದೇ ಇರುವುದರಿಂದ ಇವರನ್ನು ದೋಷಮುಕ್ತರನ್ನಾಗಿ ಮಾಡಲು ಸಹ ಶಿಫಾರಸ್ಸು ಮಾಡಿರುವರು. ಈ ಬಗ್ಗೆ ಶ್ರೀ ಎಸ್.ದಿನೇಶ್ ಕುಮಾರ್(ಆಪಾದಿತ ನೌಕರ–1) ಇವರಿಗೆ ಎರಡನೇ ಕಾರಣ ಕೇಳುವ ದಿನಾಂಕ: 26–9–2003ರ ನೋಟೀಸನ್ನು ವಿಚಾರಣಾಧಿಕಾರಿಯವರ ದಿನಾಂಕ 29.7.2003ರ ವರದಿಯ ಪ್ರತಿ ಹಾಗೂ ಮಾನ್ಯ ಲೋಕಾಯುಕ್ತರ ಶಿಫಾರಸ್ಸಿನ ಪತ್ರ ದಿನಾಂಕ 3.9.2003ರ ಪ್ರತಿಯೊಂದಿಗೆ ಹೊರಡಿಸಲಾಗಿತ್ತು. ಸದರಿ ಎರಡನೇ ಕಾರಣ ಕೇಳುವ ನೋಟೀಸಿಗೆ ಆಪಾದಿತ ನೌಕರರಾದ ಎಸ್.ದಿನೇಶ್ ಕುಮಾರ್ ಇವರು ದಿ: 11–11–2003 ರಂದು ತಮ್ಮ ಹೇಳಿಕೆಯಲ್ಲಿ ಈ ಕೆಳಕಂಡಂತೆ ತಿಳಿಸಿದ ಕಾರಣಗಳಿಂದಾಗಿ, ತಮ್ಮನ್ನು ದೋಷಮುಕ್ತರನ್ನಾಗಿ ಪರಿಗಣಿಸುವಂತೆ ಕೋರಿರುವರು;

1) ವಾಣಿಜ್ಯ ತೆರಿಗೆ ಅಧಿಕಾರಿ (ವಸೂಲಿ) ಇವರ ದಿನಾಂಕ: 5.7.93ರ ಹಿಂಬರಹದ ಮೇರೆಗೆ ಶ್ರೀ ಜಯರಾಂ (ಫಿರ್ಯಾದುದಾರ) ಇವರು ದಿನಾಂಕ: 8.7.93 ರ ನ್ಯಾಯಾಲಯದ ಆದೇಶದ ದೃಡೀಕೃತ ಪ್ರತಿಯನ್ನು ಸಲ್ಲಿಸಿದ್ದು, ಅದೇ ದಿನ ವಾಣಿಜ್ಯ ತೆರಿಗೆ ಅಧಿಕಾರಿ (ವಸೂಲಿ) ಇವರು ಫಿರ್ಯಾದುದಾರರ ಕಾರ್ಖಾನೆಗೆ ಭೇಟಿ ನೀಡಿ ಬೀಗಮುದ್ರೆಯನ್ನು ತೆಗೆದಿರುವುದರಿಂದ ಆಪಾದಿತರು ಈ ಬೀಗಮುದ್ರೆಯನ್ನು ತೆಗೆಯಲು ಅಕ್ರಮ ಸಂಭಾವನೆಯನ್ನು ನೀಡಲು ಒತ್ತಾಯಿಸುವುದಾಗಲೀ ಅಥವಾ ಅದನ್ನು ಪಡೆಯುವುದಾಗಲೀ ಉದ್ಭವಿಸುವುದಿಲ್ಲ.
2) ಫಿರ್ಯಾದುದಾರರು ಮರುದಿನ ತೆರಿಗೆಯ ಹಣವನ್ನು ಪಾವತಿಸುವುದಾಗಿ ತಿಳಿಸಿದ್ದು, ಅದನ್ನು ಸಂಗ್ರಹಿಸಲು ತಮ್ಮನ್ನು ವಾಣಿಜ್ಯ ತೆರಿಗೆ ಅಧಿಕಾರಿ (ವಸೂಲಿ) ಇವರು ಕಳುಹಿಸಿದ್ದರೆಂದು ಮತ್ತು ಈ ಕಾರಣದಿಂದಾಗಿ ಆಪಾದಿತರು ಸದರಿ ಕಾರ್ಖಾನೆಗೆ ರಸೀತಿ ಪುಸ್ತಕದೊಂದಿಗೆ ಹೋಗಿದ್ದ ಸಂದರ್ಭದಲ್ಲಿ ಫಿರ್ಯಾದುದಾರರು ಲೋಕಾಯುಕ್ತರ ಬಲೆಗೆ ಸಿಕ್ಕಿಸಿದರು.
3) ದೋಷಾರೋಪಣಾ ಪಟ್ಟಿಯಲ್ಲಿದ್ದಂತಹ ಸಾಕ್ಷಿಗಳಲ್ಲಿ ಇಬ್ಬರನ್ನು ವಿಚಾರಣೆಯಲ್ಲಿ ಪರಿಶೀಲಿಸದೆ ವಿಚಾರಣಾಧಿಕಾರಿಯವರು ಆರೋಪ ಸಾಬೀತಾಗಿರುವ ನಿರ್ಣಯಕ್ಕೆ ಬಂದಿರುತ್ತಾರೆ.
4) ವಿಚಾರಣಾಧಿಕಾರಿಯವರು ವಾಣಿಜ್ಯ ತೆರಿಗೆ ಅಧಿಕಾರಿಯವರ ಆದೇಶವನ್ನು ಒದಗಿಸಲು ಅವಕಾಶ ಕೋರಿದ್ದರೂ ಅದನ್ನು ನೀಡಿಲ್ಲ. ವಿಚಾರಣಾಧಿಕಾರಿಯವರು ಲೋಕಾಯುಕ್ತ ತನಿಖೆಗೆ ಸಂಬಂಧಿಸಿದ ಕಡತವನ್ನು ತರಿಸಿಲ್ಲ.
5) ಈ ಪ್ರಕರಣಕ್ಕೆ ಸಂಬಂಧಿಸಿದ ಕರೆನ್ಸಿ ನೋಟ್, ಫಿನಾಪ್ತಲಿನ್ ಮತ್ತು ಸೋಡಿಯಂ ಕಾರ್ಬೋನೇಟ್ ದ್ರಾವಣವುಳ್ಳ ಸೀಸೆ ಲಭ್ಯವಿರದ ಕಾರಣ ಆಪಾದಿತರು ಸಾಕ್ಷಿದಾರರನ್ನು ಪಾಟೀ ಸವಾಲು ಮಾಡಲು ಸಾಧ್ಯವಾಗಲಿಲ್ಲ.
6) ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಆಪಾದಿತರ ವಿರುದ್ಧದ ಕ್ರಿಮಿನಲ್‌ಮೊಕದ್ದಮೆಯು ಸಧ್ಯದಲ್ಲೇ ಇತ್ಯರ್ಥಗೊಳ್ಳಲಿರುವುದರಿಂದ ಈ ಲೋಕಾಯುಕ್ತ ನಡೆಸಿದ ವಿಚಾರಣೆಯ ಬಗ್ಗೆ ತೀರ್ಮಾನವನ್ನು ಮುಂದೂಡಲು ಕೋರಿದ್ದಾರೆ.

ಸದರಿ ಆಪಾದಿತ ನೌಕರನ ಹೇಳಿಕೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ ಮತ್ತು ಅದನ್ನು ತಿರಸ್ಕರಿಸಲಾಗಿದೆ. ಅಕ್ರಮ ಸಂಭಾವನೆಯ ಮೊತ್ತವನ್ನು ವಾಹನ ಚಾಲಕರಾದ ಶ್ರೀ ಎನ್.ಎ.ಬಾಲಚಂದ್ರ (ಆಪಾದಿತ ನೌಕರ–2) ಇವರಲ್ಲಿ ಸಿಕ್ಕಿರುತ್ತದೆ ಮತ್ತು ಇವರ ವಿರುದ್ಧ ಮಾಡಲಾದ ಆರೋಪವು ಸಾಭೀತಾಗಿರದ ಕಾರಣ ಇವರನ್ನು ಲೋಕಾಯುಕ್ತರು ದೋಷಮುಕ್ತರನ್ನಾಗಿ ಪರಿಗಣಿಸಲು ಶಿಫಾರಸ್ಸು ಮಾಡಿರುತ್ತಾರೆ. ಇವರ ವಿರುದ್ಧಮಾಡಲಾದ ಆರೋಪವು ಸಾಬೀತಾಗಿರದ ಕಾರಣ ಇವರನ್ನು ದೋಷ ಮುಕ್ತರನ್ನಾಗಿ ಮಾಡಲು ಪರಿಶೀಲಿಸಲಾಗಿದೆ. ಆದರೆ, ಶ್ರೀ ಎಸ್.ದಿನೇಶ್ ಕುಮಾರ್ ಇವರು ಅಕ್ರಮ ಸಂಭಾವನೆಯನ್ನು ಫಿರ್ಯಾದುದಾರರಿಂದ ಕೇಳಿದ್ದರೆಂಬ ಆರೋಪವು ಸಾಬೀತಾಗಿರುತ್ತದೆ ಮತ್ತು ಲೋಕಾಯುಕ್ತರ ಶಿಫಾರಸ್ಸಿನಂತೆ ಶ್ರೀ ಎಸ್.ದಿನೇಶ್‌ಕುಮಾರ್, ಇವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡುವ ಕಠಿಣ ದಂಡನೆಯನ್ನು ನಿಯಮ–8(viii) ರ ರೀತ್ಯ ವಿಧಿಸುವ ಬಗ್ಗೆಯೂ ಪರಿಶೀಲಿಸಲಾಗಿದೆ. ಅದರಂತೆ, ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಆಇ 160 ವಾತೆಸಿ 99, ಬೆಂಗಳೂರು, ದಿನಾಂಕ: 2ನೇ ಡಿಸೆಂಬರ್ 2004.**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಎಸ್. ದಿನೇಶ್ ಕುಮಾರ, ವಾಣಿಜ್ಯ ತೆರಿಗೆ ಪರಿವೀಕ್ಷಕ (ಆಪಾದಿತ ನೌಕರ–1) ಇವರ ವಿರುದ್ಧದ ಆರೋಪವು ವಿಚಾರಣೆಯಲ್ಲಿ ಸಾಬೀತಾಗಿರುವ ಕಾರಣ ಇವರಿಗೆ ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8(viii) ರನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾಮಾಡುವ ಕಠಿಣ ದಂಡನೆ ವಿಧಿಸಲು ಸರ್ಕಾರವು ಆದೇಶಿಸಿದೆ. ಅಲ್ಲದೇ, ಶ್ರೀ ಎನ್.ಎ.ಬಾಲಚಂದ್ರ, ವಾಹನ ಚಾಲಕ (ಆಪಾದಿತ ನೌಕರ–2) ಇವರ ವಿರುದ್ಧದ ಆರೋಪವು ವಿಚಾರಣೆಯಲ್ಲಿ ಸಾಬೀತಾಗಿರದ ಕಾರಣ ಇವರನ್ನು ದೋಷಮುಕ್ತರನ್ನಾಗಿ ಮಾಡಿ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆಲಿಸ್ ಗೊನ್ಸಾಲ್ವಿಸ್**
ಪಿ.ಆರ್. 1357 ಪೀಠಾಧಿಕಾರಿ, ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ-2)

## ನಗರಾಭಿವೃದ್ಧಿ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ನಅಇ 156 ನಯೋಸೇ 2004, ಬೆಂಗಳೂರು, ದಿನಾಂಕ: 2ನೇ ಡಿಸೆಂಬರ್ 2004**

ಅಧಿಸೂಚನೆ ಸಂಖ್ಯೆ: ನಅಇ 72 ನಯೋಸೇ 2004 ದಿನಾಂಕ: 8.10.2004 ರಲ್ಲಿ ಶ್ರೀ ಟಿ. ಅಜ್ಜಪ್ಪ, ನಗರ ಯೋಜನಾ ಸಹಾಯಕ ನಿರ್ದೇಶಕರು (ನಿವೃತ್ತ) ಇವರ ಅಮಾನತ್ತಿನ ಅವಧಿ "ದಿನಾಂಕ: 16.4.99 ರಿಂದ 24.5.99" ರವರೆಗೆ ಎಂಬುದರ ಬದಲಾಗಿ ದಿನಾಂಕ: "16.4.99 ರಿಂದ 26.5.99 ರವರೆಗೆ" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ. ರಂಗನಾಥ್**
ಪಿ.ಆರ್. 1358 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ಶಿಕ್ಷಣ ಸಚಿವಾಲಯ**

**ವಿಷಯ:** ಶ್ರೀಮತಿ ನಸೀಮಾ ಬೇಗಂ, ಮುಖ್ಯ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ಚೇಳೂರು, ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ ಇವರ ಸ್ವಯಂ ನಿವೃತ್ತಿಗೆ ಅನುಮತಿ ನೀಡುವ ಬಗ್ಗೆ ಆದೇಶ.

**ಓದಲಾಗಿದೆ:**
1. ದಿನಾಂಕ: 5.12.2000ರ ಶ್ರೀಮತಿ ನಸೀಮಾ ಬೇಗಂ ರವರ ಮನವಿ.
2. ದಿನಾಂಕ: 14.8.2003ರ ಸಾರ್ವಜನಿಕ ಶಿಕ್ಷಣ ಇಲಾಖಾ ಆಯುಕ್ತರ ಪತ್ರ ಸಂಖ್ಯೆ: ಸಿ1(5), ಸ್ವಇನಿ 02:2000-01.
3. ದಿನಾಂಕ: 19.11.2003ರ ಸಾರ್ವಜನಿಕ ಶಿಕ್ಷಣ ಇಲಾಖಾ ಆಯುಕ್ತರ ಪತ್ರ ಸಂಖ್ಯೆ: ಸಿ1(5) ಸ್ವಇನಿ 02: 99-2000.
4. ದಿನಾಂಕ: 6.7.2004ರ ಸಾರ್ವಜನಿಕ ಶಿಕ್ಷಣ ಇಲಾಖಾ ಆಯುಕ್ತರ ಪತ್ರ ಸಂಖ್ಯೆ: ಸಿ2(6) ಪಅದೂ 2:2004-05.
5. ಕೆ.ಎ.ಟಿ. ಅರ್ಜಿಸಂಖ್ಯೆ: 2935:2004 ರಲ್ಲಿ ದಿನಾಂಕ: 17.6.2004ರ ಆದೇಶ.

**ಪ್ರಸ್ತಾವನೆ:**

ಶ್ರೀಮತಿ ನಸೀಮಾ ಬೇಗಂ, ಮುಖ್ಯ ಶಿಕ್ಷಕಿ, ಸರ್ಕಾರಿ ಬಾಲಕಿಯರ ಪ್ರೌಢಶಾಲೆ, ಚೇಳೂರು, ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ, ಇವರು ದಿನಾಂಕ: 5.12.2000 ರಂದು ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ, ತುಮಕೂರು ಜಿಲ್ಲೆ ಇವರಿಗೆ ಸಲ್ಲಿಸಿದ ಮನವಿಯಲ್ಲಿ ಕ್ರಮ ಸಂಖ್ಯೆ (1) ರಲ್ಲಿ ತಾನು ಈಗಾಗಲೇ ದಿನಾಂಕ: 2.12.1999 ರಿಂದ ಜಾರಿಗೆ ಬರುವಂತೆ ಸ್ವಯಂ ನಿವೃತ್ತಿ ಪಡೆಯಲು ಅನುಮತಿಗಾಗಿ ಪ್ರಸ್ತಾವನೆ ಸಲ್ಲಿಸಿದ್ದೆನು ಎಂದೂ, ಆದರೆ ಅನುಮತಿ ಸಕಾಲದಲ್ಲಿ ಬಾರದ ಕಾರಣ ದಿನಾಂಕ: 1.2.2000 ವರೆವಿಗೂ ಶಾಲೆಯಲ್ಲಿ ಕಾರ್ಯನಿರ್ವಹಿಸಿದ್ದು ದಿನಾಂಕ: 3.4.2000 ರಂದು ಪ್ರಭಾರವನ್ನು ಬೇರೆಯವರಿಗೆ ವಹಿಸಿ ನಂತರ ದಿನಾಂಕ: 15.4.2000 ವರೆವಿಗೂ ರಜೆ ಮಂಜೂರಾತಿಗಾಗಿ ರಜೆ ಅರ್ಜಿ ಸಲ್ಲಿಸಿರುತ್ತೇನೆಂದು ತಿಳಿಸಿ, ಈ ಹಿನ್ನೆಲೆಯಲ್ಲಿ ದಿನಾಂಕ: 31.5.2000 ರಿಂದ ಜಾರಿಗೆ ಬರುವಂತೆ ಸ್ವಯಂ ನಿವೃತ್ತಿ ಹೊಂದಲು ಅನುಮತಿ ಕೊಡಬೇಕೆಂದು ವಿನಂತಿಸಿದ್ದರು.

ಶ್ರೀಮತಿ ನಸೀಮಾ ಬೇಗಂ ರವರ ಮನವಿಯನ್ನು ಪರಿಶೀಲಿಸಿ ಸಾರ್ವಜನಿಕ ಶಿಕ್ಷಣ ಇಲಾಖಾ ಆಯುಕ್ತರು ಮೇಲೆ ಓದಲಾದ ಕ್ರಮಸಂಖ್ಯೆ (2)ರ ದಿನಾಂಕ: 14.8.2003ರ ಪತ್ರದಲ್ಲಿ ಪ್ರಸ್ತಾವನೆಯನ್ನು ಸಲ್ಲಿಸುತ್ತಾ, ಶ್ರೀಮತಿ ನಸೀಮಾ ಬೇಗಂ ಅವರಿಗೆ ಸರ್ಕಾರದಿಂದ ಆದೇಶವಾಗುವ ದಿನಾಂಕದಿಂದ ಸ್ವಯಂ ನಿವೃತ್ತಿ ಹೊಂದಲು ಅನುಮತಿ ನೀಡುವಂತೆ ಕೋರಿದ್ದರು.

ತದನಂತರ ಸಾರ್ವಜನಿಕ ಶಿಕ್ಷಣ ಇಲಾಖಾ ಆಯುಕ್ತರು ಕ್ರಮ ಸಂಖ್ಯೆ (3) ರಲ್ಲಿನ ದಿನಾಂಕ: 19.11.2003ರ ಪತ್ರದಲ್ಲಿ ಶ್ರೀಮತಿ ನಸೀಮಾ ಬೇಗಂ ಸ್ವಯಂ ನಿವೃತ್ತಿಯ ಬಗ್ಗೆ ಮತ್ತಷ್ಟು ಮಾಹಿತಿಗಳನ್ನು ಒದಗಿಸುತ್ತ, ಸ್ವಯಂ ನಿವೃತ್ತಿಗೆ ಅನುಮತಿ ನೀಡಲು ಸರ್ಕಾರ ಸಕ್ಷಮ ಪ್ರಾಧಿಕಾರವಾಗಿರುವುದರಿಂದ ದಿನಾಂಕ: 18.4.2003 ರಂದು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದೆಯೆಂದೂ ಹಾಗೂ ಶ್ರೀಮತಿ ನಸೀಮಾ ಬೇಗಂ ಅವರು ದಿನಾಂಕ: 1.6.2000 ರಿಂದ ನಂತರ ಸೇವೆಯಲ್ಲಿ ಮುಂದುವರೆದಿಲ್ಲವೆಂದು ತಿಳಿಸಿರುತ್ತಾರೆ.

ಶ್ರೀಮತಿ ನಸೀಮಾ ಬೇಗಂ ರವರು ದಿನಾಂಕ: 7.12.1999 ರಂದು ಸ್ವಯಂ ನಿವೃತ್ತಿಗೆ ಮೂರು ತಿಂಗಳ ನೋಟೀಸ್ ಕೊಟ್ಟು 4 ವರ್ಷಗಳು ಕಳೆದ ನಂತರವೂ ಸ್ವಯಂ ನಿವೃತ್ತಿಗೆ ಅನುಮತಿ ದೊರೆಯಲಿಲ್ಲವೆಂದು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂಖ್ಯೆ 2935:2004ನ್ನು ದಾಖಲಿಸಿದ್ದರು. ಈ ಅರ್ಜಿಯನ್ನು ಮಾನ್ಯ ನ್ಯಾಯಾಲಯವು ಪುರಸ್ಕರಿಸಿ ಈ ಕೆಳಕಂಡಂತೆ ಆದೇಶಿಸುತ್ತಾ, ನ್ಯಾಯಾಲಯದ ಆದೇಶ ತಲುಪಿದ ಎರಡು ತಿಂಗಳ ಒಳಗೆ ಅರ್ಜಿದಾರರಿಗೆ ಸ್ವಯಂ ನಿವೃತ್ತಿ ಹೊಂದಲು ಘಟನೋತ್ತರ ಆದೇಶ ಹೊರಡಿಸಿ ನಂತರ ಅವರಿಗೆ ಸಲ್ಲಬೇಕಾದ ನಿವೃತ್ತಿ ವೇತನ ಸೌಲಭ್ಯಗಳನ್ನು ಮೂರು ತಿಂಗಳ ಒಳಗೆ ಇತ್ಯರ್ಥಪಡಿಸುವಂತೆ ಆದೇಶಿಸಿದೆ.

"Therefore, the Respondents are directed to issue necessary orders of permission post-facto within a period of 2 months from the date of receipt of the certified copy of this order. Thereafter to take necessary steps to settle her pensionary benefits within a period of 3 months".

ಕರ್ನಾಟಕ ಆಡಳಿತ ನ್ಯಾಯಮಂಡಳಿಯ ದಿನಾಂಕ: 17.06.2004ರ ಆದೇಶವನ್ನು ಅನುಷ್ಠಾನಗೊಳಿಸಲು ಸರ್ಕಾರವು ತೀರ್ಮಾನಿಸಿದೆ; ಹಾಗೂ ಶ್ರೀಮತಿ ನಸೀಮಾ ಬೇಗಂ ರವರಿಂದ ದಿನಾಂಕ: 3.4.2000 ರಂದು ಚೇಳೂರಿನ ಸರ್ಕಾರಿ ಪ್ರೌಢಶಾಲೆ ಮುಖ್ಯ ಶಿಕ್ಷಕರ ಹುದ್ದೆಯ ಪ್ರಭಾರವನ್ನು ಪಡೆದ ವ್ಯಕ್ತಿಯ ಮೇಲೆ ಸಿ.ಸಿ.ಎ. ನಿಯಮಾವಳಿಗಳ ನಿಯಮ 11 ರಡಿ ಕ್ರಮ ಜರುಗಿಸಲು ಹಾಗೂ ಸರ್ಕಾರಕ್ಕೆ ಒಂದು ತಿಂಗಳೊಳಗೆ ವರದಿ ಕಳುಹಿಸಿಕೊಡಲೂ ಸಹ ಆಯುಕ್ತರಿಗೆ ಸೂಚನೆ ನೀಡಲು ತೀರ್ಮಾನಿಸಿ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 71 ಡಿಜಿಪಿ 2003, ಬೆಂಗಳೂರು, ದಿನಾಂಕ: 26ನೇ ನವೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಶ್ರೀಮತಿ ನಸೀಮಾ ಬೇಗಂ, ಮುಖ್ಯ ಶಿಕ್ಷಕಿ ಸರ್ಕಾರಿ ಬಾಲಕಿಯರ ಪ್ರೌಢಶಾಲೆ, ಚೇಳೂರು, ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ ಇವರಿಗೆ ದಿನಾಂಕ: 31.5.2000 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 285(1) (ಬಿ) ರನ್ವಯ ಸ್ವಯಂ ನಿವೃತ್ತಿ ಹೊಂದಲು ಅನುಮತಿ ನೀಡಲಾಗಿದೆ.

ಯಾವ ಅಧಿಕೃತ ಆದೇಶವೂ ಇಲ್ಲದೇ ದಿನಾಂಕ: 3.4.2000 ರಂದು ಶ್ರೀಮತಿ ನಸೀಮಾ ಬೇಗಂ, ಇವರಿಂದ ಚೇಳೂರಿನ ಸರ್ಕಾರಿ ಪ್ರೌಢಶಾಲೆ ಮುಖ್ಯ ಶಿಕ್ಷಕರ ಹುದ್ದೆಯ ಪ್ರಭಾರವನ್ನು ಪಡೆದ ವ್ಯಕ್ತಿಯ ಮೇಲೆ ಸಿ.ಸಿ.ಎ. ನಿಯಮಾವಳಿಯ ನಿಯಮ 11 ರಡಿ ಕ್ರಮ ಜರುಗಿಸಲು ಹಾಗೂ ಈ ದಿಶೆಯಲ್ಲಿ ತೆಗೆದುಕೊಂಡ ಕ್ರಮದ ಬಗ್ಗೆ ವರದಿಯನ್ನು ಒಂದು ತಿಂಗಳೊಳಗೆ ಸರ್ಕಾರಕ್ಕೆ ಸಲ್ಲಿಸುವಂತೆ ಸಾರ್ವಜನಿಕ ಶಿಕ್ಷಣ ಇಲಾಖಾ ಆಯುಕ್ತರಿಗೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಫ್.ಆರ್. ಸಂಬರಗಿ**

ಪಿ.ಆರ್. 1361 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು-1,2).

**FOREST, ECOLOGY AND ENVIRONMENT SECRETARIAT**

**CORRIGENDUM No. FEE 215 FLL 2003, Bangalore, Dated: 27th November 2004**

In G.O.No. FEE 13 FGL 2000, dated: 26.2.2003 in order portion, the condition at Sl.No.6 is deleted.

Condition No.8 is modified as follows "compensatory afforestation over 125 ha. of non-forest land will be carried out by the Forest Department for which the cost has already been paid by the user agency".

By Order and in the Name of the Governor of Karnataka,

**S.R. VATSALA**

P.R. 1362 Under Secretary to Government, Forest, Ecology and Environment Department.

**Subject:** Diversion of 4.10 ha. of forest land in Kemphole and Moorkannugudda R.F. for establishment of Kadumane Mini Hydel Scheme by M/s Paschim Holdings Private Limited, Hydrabad.

**Read:**
1. Letter No.A5(3) GFL.CR.1:2003-04, dated: 27.6.2003 of the Principal Chief Conservator of Forests, Bangalore.
2. State Government letter No.FEE 269 FGL 2002, dated: 3.9.2003.
3. Letter No. F(c)A/11.2/267/KAR/HEP dated: 20.5.2004 of Government of India Ministry of Environment and Forest, Regional Office (South Zone) Bangalore.
4. State Government letter No. FEE 269 FGL 2002 dated: 14.9.2004.
5. Letter No. F(c)A/11.2/267/Kar/HFP dated: 29.9.2004 of Government of India Ministry of Environment and Forest, Regional Office (South Zone) Bangalore.

**PREAMBLE:**

The Principal Chief Conservator of Forests, Bangalore vide his letter dated 27.6.2003 read at (1) above, has submitted the proposal to obtain the approval of Government of India under section 2 of Forest (Conservation) Act, for diversion of 4.10 ha. of forest land for the purpose of establishing Kadumane Mini Hydel Project in Sy.No.387 and 400 of Heggadde Village and Sy.No.68 of Kadumane village in Moorkannugudda Reserve Forest Hassan District in favour of M/s Paschim Holdings Private Limited, Hydrabad subject to certain conditions.

Accordingly the proposal was recommended to Government of India vide State Government letter dated 3.9.2003 read at (2) above.

The Government of India, Ministry of Environment and Forests Regional Office (South Zone) Bangalore vide their letter dated: 20.5.2004 read at (3) above has given its approval in Principle (Stage-1) subject to fulfilment of certain conditions and the same was communicated to the Principal Chief Conservator of Forests, Bangalore for compliance.

The Principal Chief Conservator of Forests, Bangalore vide his letter dated 6.9.2004 furnished the compliance report and the same has been sent to Government of India vide State Government letter dated: 14.9.2004 read at (4) above.

Finally Government of India Ministry of Environment and Forests Regional Office (South Zone) Bangalore vide their letter dated: 29.9.2004 read at (5) above has conveyed its approval (Stage-II) under section 2 of Forest (Conservation) Act, 1980 for diversion of 4.10 ha. of forest land in Sy.No.387 and 400 of Heggadde Village and Sy.No.68 of Kadumane village in Kemphole and Moorkannugudda Reserve Forest, Sakaleshpur Taluk, Hassan District for establishment of Kadumane Mini Hydel Scheme I by M/s. Paschim Holdings Private Limited subject to certain conditions.

The proposal has been examined in detail and hence the order.

**GOVERNMENT ORDER No. FEE 269 FGL 2002, Bangalore, Dated: 2nd December 2004**

In the circumstances explained in the preamble Government are pleased to accord sanction under section 2 of Forest (Conservation) Act, 1980 for diversion of 4.10 ha. of forest land in Sy.No.387 and 400 of Heggadde Village and Sy.No.68 of Kadumane village in Kemphole and Moorkannugudda Reserve Forest, Sakaleshpur Taluk, Hassan District for establishment of Kadumane Mini Hydel Scheme I by M/s. Paschim Holdings Private Limited, Hydrabad subject to the following conditions.

1. The legal status of forest land shall remain unchanged.
2. The compensatory afforestation shall be raised over 4.10 ha. of identified non-forest land at Sy.No.81 of Margunda village. Hanabalu, Hubli, Sakleshpur Taluk at the cost of the user agency. The State Government shall obtain prior permission of Central Government for change of location and schedule of compensatory afforestation site if any.
3. The non-forest land for compensatory afforestation shall be notified by the State Government as Reserve Forest under Section 4 or PF under section 29 of the Indian Forest Act, 1927 or the State Act within a period of 6 months and Nodal Officer (Forest Conservation) shall report the compliance within six months.

4. The Net Present Value (NPV) of the forest area diverted under this proposal from the user agency shall be paid by the user agency as per the orders of the Hon'ble Supreme Court of India dated: 30.10.2002 and 1.8.2003 in IA No.566 in WP (c) No.202/95 and as per the guidelines issued by Ministry vide letter No.5-1/1998-FC(Pt.II) dated: 18.9.2003 and 22.9.2003 and notification No.FEE 242 FGL 2003, dated: 17.1.2004.
5. The finds realised towards Compensatory afforestation and Net Present Value shall be deposited with Compensatory Afforestation Fund Management and Planning Authority (CAMPA) which has already been constituted and notified by the Central Government on 23.4.2004. Till such time, the CAMPA intimates the Head of Account for deposition of funds, the funds will be maintained in the form of fixed deposits in the name of Nodal Officer or concerned Divisional Forest Office of the State Government. The funds realised towards the NPV and C.A. shall not be utilized by the State Government.
6. The total forest area utilized for the project shall not exceed 4.10 ha. In case the land is not used for the stipulated purpose then the area will be resumed by the Forest Department.
7. The user agency has to pay the lease rent as fixed by the Government time to time.
8. The user agency has to pay the cost of compensatory afforestation at the rate of Rs.54,200-00 per ha. or changed rate at the time of payment.
9. The lease shall be for a period of 30 years on the date of State Govt. notification and the land shall be used for the said purpose only. If this land is not used for the stipulated purpose or when it no longer needed for the stipulated purpose or work on the project does not start within one and half year over after transfer of land the area shall be resumed back by Deputy Conservator of Forests, Hassan.
10. Extraction cost has to be borne by the user agency if any as calculated by the Deputy Conservator of Forests.
11. The Karnataka Forest Act and Rules will be applicable for any Violation.
12. The user agency should not sub lease the area.
13. The user agency shall abide by all the conditions imposed upon by Government of India, Government or Karnataka and Principal Chief Conservator of Forests.
14. Any other condition to be stipulated by Government of India State Government / Principal Chief Conservator of Forests Karnataka in the interest of conservation of forests.

By Order and in the Name of the Governor of Karnataka,

**S.R. VATSALA**

P.R. 1363 Under Secretary to Government, Forest, Ecology and Environment Department.

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಎನ್. ಸಿದ್ದರಾಮೇಗೌಡ, ದ್ವಿದಸ, ಶಿವಮೊಗ್ಗ ಜಿಲ್ಲೆ ಇ ವರು ಸಿಸಿಎ ನಿಯಮಾವಳಿ ನಿಯಮ 18 ರಡಿಯಲ್ಲಿ ಸಲ್ಲಿಸಿದ ಮೇಲ್ಮನವಿ ಬಗ್ಗೆ.

**ಓದಲಾಗಿದೆ:**
1. ಶಿವಮೊಗ್ಗ ಜಿಲ್ಲಾಧಿಕಾರಿಯವರ ಆದೇಶ ಸಂಖ್ಯೆ:ಸಿಬ್ಬಂದಿ(1)ಸಿಸಿಎ 4/93-94ದಿನಾಂಕ 18.9.1997.
2. ಶ್ರೀ ಎಸ್. ಸಿದ್ದರಾಮೇಗೌಡ, ದ್ವಿದಸ, ತಾಲ್ಲೂಕು ಕಛೇರಿ, ಶಿವಮೊಗ್ಗ ಇ ವರು ದಿನಾಂಕ 18.9.97 ರ ಶಿವಮೊಗ್ಗ ಜಿಲ್ಲಾಧಿಕಾರಿಯವರ ಆದೇಶವನ್ನು ಪ್ರಶ್ನಿಸಿ ಹಿಂದಿನ ಬೆಂಗಳೂರು ವಿಭಾಗಾಧಿಕಾರಿಯವರಿಗೆ ದಿನಾಂಕ 20.11.97 ರಂದು ಸಲ್ಲಿಸಿದ ಮೇಲ್ಮನವಿ.
3. ಶಿವಮೊಗ್ಗ ಜಿಲ್ಲಾಧಿಕಾರಿಯವರ ಪತ್ರ ಸಂಖ್ಯೆ:ಸಿಬ್ಬಂದಿ(3)ಸಿಸಿಎ 4/93-94 ದಿನಾಂಕ 23.2.2004.
4. ಸರ್ಕಾರದ ವಿಚಾರಣಾ ತಿಳುವಳಿಕೆ ಸೂಚನಾ ಪತ್ರ ಸಂಖ್ಯೆ ಕಂಇ 82 ಎಂವಿಎಸ್ 2004 ದಿನಾಂಕ 2.4.2004 ಹಾಗೂ ತದನಂತರ ಹೊರಡಿಸಿರುವ ಸೂಚನಾ ಪತ್ರಗಳು

**ಪ್ರಸ್ತಾವನೆ:**

ಶ್ರೀ ಎಸ್. ಸಿದ್ದರಾಮೇಗೌಡ, ಇ ವರು ಹೊಸನಗರ ತಾಲ್ಲೂಕು ಕಚೇರಿಯಲ್ಲಿ ಸೇವೆ ಸಲ್ಲಿಸುತ್ತಿದ್ದಾಗ ನ್ಯಾಯಾಲಯದ ಪ್ರಕರಣ ಸಂಖ್ಯೆ ಆರ್. ಮಿಸ್ 31/85-86 ಗೆ ಸಂಬಂಧಿಸಿದಂತೆ ಬರುವೆ ಗ್ರಾಮದಸರ್ವೆ ನಂ 37/1 ರಲ್ಲಿ ಮನೆ ದಳಕ್ಕೆ ಸಂಬಂಧಿಸಿದ ಮೂಲ ಕಡತ ಸಂಖ್ಯೆ ಎಲ್‌ಎನ್‌ಡಿ. ಬಿಎಸ್. 21/85-86ರ ಕಡತವನ್ನು ಗೈರು ವಿಲೇ ಮಾಡಿದ್ದು ಸದರಿ ಕಡತ ಲಭ್ಯವಿರುವುದಿಲ್ಲವಾದ್ದರಿಂದ ಜಿಲ್ಲಾಧಿಕಾರಿಗಳ ನ್ಯಾಯಾಲಯಕ್ಕೆ ಸದರಿ ಕಡತವನ್ನು ಸಲ್ಲಿಸಲು ಸಾಧ್ಯವಾಗಲಿಲ್ಲ. ಈ ಇ ದಕ್ಕೆ ಸದರಿ ನೌಕರರೇ ನೇರ ಜವಾಬ್ದಾರರಾಗಿರುವುದರಿಂದ ಅವರನ್ನು ಶಿಸ್ತು ಕ್ರಮಕ್ಕೆ ಒಳಪಡಿಸಿ ಅವರ ಮೇಲೆ ಮಾಡಲಾದ ಆರೋಪ ಸಾಬೀತಾಗಿರುವ ಹಿನ್ನೆಲೆಯಲ್ಲಿ ಅವರಿಗೆ 2ನೇ ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಿ ಅವರಿಂದ ಲಿಖಿತ ಹೇಳಿಕೆಯನ್ನು ಪಡೆದು ಅವರು ನೀಡಿದ ಲಿಖಿತ ಹೇಳಿಕೆ ಸಮರ್ಪಕವಾಗಿಲ್ಲವೆಂದು ಪರಿಗಣಿಸಿ ಆರೋಪ ಸಾಬೀತಾಗಿದೆ ಎಂದು ದೃಢಪಟ್ಟಿರುವುದರಿಂದ ಮೇಲೆ ಓದಲಾದ ಕ್ರಮಸಂಖ್ಯೆ(1)ರ ಆದೇಶದಲ್ಲಿ ಶ್ರೀ ಎಸ್. ಸಿದ್ದರಾಮೇಗೌಡ, ದ್ವಿದಸ ಇ ವರ 2 ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ರಹಿತವಾಗಿ ತಡೆಹಿಡಿದು ಜಿಲ್ಲಾಧಿಕಾರಿಗಳು ದಂಡನೆ ವಿಧಿಸಿರುತ್ತಾರೆ.

ಜಿಲ್ಲಾಧಿಕಾರಿಗಳ ಈ ಆದೇಶವನ್ನು ಪ್ರಶ್ನಿಸಿ ಶ್ರೀ ಎಸ್. ಸಿದ್ದರಾಮೇಗೌಡ ಇ ವರು ಮೇಲೆ ಓದಲಾದ ಕ್ರಮಸಂಖ್ಯೆ (2) ರಂತೆ ಹಿಂದಿನ ಬೆಂಗಳೂರು ವಿಭಾಗಾಧಿಕಾರಿಯವರಿಗೆ ಮೇಲ್ಮನವಿ ಸಲ್ಲಿಸಿರುತ್ತಾರೆ. ವಿಭಾಗಾಧಿಕಾರಿಗಳ ಕಛೇರಿಗಳು ದಿನಾಂಕ 1.4.2003 ರಿಂದ ರದ್ದುಪಡಿಸಲಾಗಿರುವುದರಿಂದ ಈ ಮೇಲ್ಮನವಿ ಬೆಂಗಳೂರು ವಿಭಾಗಾಧಿಕಾರಿಗಳ ಕಛೇರಿಯಿಂದ ಸರ್ಕಾರಕ್ಕೆ ವರ್ಗವಾಗಿ ಬಂದಿರುತ್ತದೆ. ಸಿಸಿಎ ನಿಯಮಗಳಿಗೆ ಮಾಡಿದ ತಿದ್ದುಪಡಿ ಅನುಸಾರ ಜಿಲ್ಲಾಧಿಕಾರಿಗಳು ಹೊರಡಿಸಿರುವ ಆದೇಶಕ್ಕೆ ಸರ್ಕಾರ ಮೇಲ್ಮನವಿ ಪ್ರಾಧಿಕಾರಿ ಎಂದು ಅಧಿಕಾರ ಹೊಂದಿರುತ್ತಾರೆ. ಈ ಸಂಬಂಧವಾಗಿ ಮೇಲ್ಮನವಿಗೆ ಸಂಬಂಧಿಸಿದಂತೆ ಶಿವಮೊಗ್ಗ ಜಿಲ್ಲಾಧಿಕಾರಿಗಳಿಂದ ಮೂಲ ಕಡತ ಹಾಗೂ ಕಂಡಿಕೆವಾರು ಷರಾಗಳನ್ನು ಮೇಲೆ ಓದಲಾದ ಕ್ರಮಸಂಖ್ಯೆ(3) ರಂತೆ ಪಡೆಯಲಾಗಿದೆ.

ಮೇಲ್ಮನವಿಯನ್ನು ವಿಚಾರಣೆಗೆ ತೆಗೆದುಕೊಂಡಾಗ ಹೇಳಿಕೆ ನೀಡಲು ಓದಲಾದ ಕ್ರಮ ಸಂಖ್ಯೆ (4)ರಂತೆ ಮೇಲ್ಮನವಿದಾರರಿಗೆ ನೋಟೀಸ್ ಮೂಲಕ ಅವಕಾಶ ನೀಡಲಾಗಿದೆ.

ಈ ಮೇಲ್ಮನವಿಯನ್ನು ದಿನಾಂಕ 28.7.04, 31.8.04, 21.9.04, 21.10.04ಹಾಗೂ 18.11.04 ರಂದು ವಿಚಾರಣೆಗೆ ತೆಗೆದುಕೊಳ್ಳಲಾಗಿದೆ. ದಿನಾಂಕ 18.11.04 ರಂದು ಮೇಲ್ಮನವಿದಾರರು ಹಾಜರಾಗಿ ತನ್ನ ಹೇಳಿಕೆಯನ್ನು ನೀಡಿರುತ್ತಾರೆ. ಈ ವೇಳೆಯಲ್ಲಿ ಬರ್ವೆ ಗ್ರಾಮದ ಸರ್ವೆ ನಂ. 37/1 ರಲ್ಲಿ ಮನೆ ದಳಕ್ಕೆ ಸಂಬಂಧಿಸಿದ ಮೂಲ ಕಡತ ಗೈರು ವಿಲೇ ಆದ ಬಗ್ಗೆ ಅವರ ಮೇಲೆ ಆರೋಪ ಮಾಡಲಾಗಿದ್ದು ಸದರಿ ಕಡತ ತದನಂತರದ ಅವಧಿಯಲ್ಲಿ ADLR ಕಚೇರಿಯಿಂದ ಹಿಂದಿರುಗಿ ಬಂದಿರುವುದರಿಂದ ಸದರಿ ಕಡತ ಇ ರುವುದರಿಂದ ಕಡತ ಕಳೆದುಹೋಗಿರುವುದಿಲ್ಲವೆಂದು ಗ್ರಹಿತವಾಗಿರುವುದರಿಂದ ಅವರ ಮೇಲೆ ಮಾಡಿದ ಆರೋಪ ಸಾಬೀತಾಗುವುದಿಲ್ಲವೆಂದು ವಾದ ಮಾಡಿರುತ್ತಾರೆ. ಈ ವಾದವನ್ನು ಬಿಟ್ಟು ಬೇರೆ ಏನನ್ನು ಹೇಳುವುದು ಇ ಲ್ಲವೆಂದು ತಿಳಿಸುತ್ತಾ ಅವರ 2 ವಾರ್ಷಿಕ ವೇತನ ಬಡ್ತಿಗಳನ್ನು ತಡೆಹಿಡಿದಿದ್ದ ದಂಡನಾ ಆದೇಶವನ್ನು ವಜಾ ಮಾಡುವಂತೆ ಕೋರಿರುತ್ತಾರೆ. ಸದರಿಯವರ ಹೇಳಿಕೆಯನ್ನು ಗಮನಿಸಿ ಈ ಪ್ರಕರಣವನ್ನು ಆದೇಶಕ್ಕಾಗಿ ಕಾಯ್ದಿರಿಸಲಾಗಿದೆ.

ಮೇಲ್ಮನವಿದಾರರು ನೀಡಿದ ಮೌಖಿಕ ಹೇಳಿಕೆಯನ್ನು ಹಾಗೂ ಅವರು ತನ್ನ ಮೇಲ್ಮನವಿಯಲ್ಲಿ ಎತ್ತಿರುವ ಎಲ್ಲಾ ಅಂಶಗಳನ್ನು ಪರಿಶೀಲಿಸಲಾಗಿದೆ. ವಿಚಾರಣಾ ವೇಳೆಯಲ್ಲಿ ಸದರಿ ಕಡತವು ಅವರು ಆ ಸ್ಥಳದಿಂದ ವರ್ಗಾವಣೆಯಾದ ನಂತರ ವಹಿಸಿಕೊಟ್ಟಿರುವ ಬಗ್ಗೆ ಯಾವುದೇ ದಾಖಲೆ ಪುರಾವೆಗಳನ್ನು ಹಾಜರುಪಡಿಸಿರುವುದಿಲ್ಲ. ಆದ್ದರಿಂದ ವಿಚಾರಣೆಯಲ್ಲಿ ಆರೋಪ ಸಾಬೀತಾಗಿದೆ ಎಂದು ಶಿಸ್ತುಪ್ರಾಧಿಕಾರಿಯವರು ತಾಳಿದ ನಿಲುವು ಸಮರ್ಪಕವಾಗಿ ಇ ರುತ್ತದೆ. ಇ ದೂ ಅಲ್ಲದೆ ಮೇಲ್ಮನವಿದಾರರು ಲಂಚ ಪ್ರಕರಣಕ್ಕೆ ಸಂಬಂಧಿಸಿದಂತೆ ಲೋಕಾಯುಕ್ತ ಪ್ರಕರಣಕ್ಕೆ ಸಂಬಂಧಿಸಿದ ಅಭಿಯೋಗ ಪ್ರಕರಣದಲ್ಲಿ ಅವರ ಮೇಲಿನ ಆರೋಪ ಸಾಬೀತಾಗಿರುವುದರಿಂದ ಅವರಿಗೆ ನ್ಯಾಯಾಲಯ ದಂಡನೆ ವಿಧಿಸಿರುವುದರಿಂದ ಅವರನ್ನು ಜಿಲ್ಲಾಧಿಕಾರಿಗಳು ಸೇವೆಯಿಂದ ವಜಾ ಮಾಡಿರುತ್ತಾರೆ. ಸದರಿಯವರನ್ನು ಸೇವೆಯಿಂದ ವಜಾ ಮಾಡಿರುವುದರಿಂದ ಅವರು ಹಿಂದಿನ ಸೇವೆಯನ್ನು ಪೂರ್ಣವಾಗಿ ಕಳೆದು ಕೊಂಡಂತಾಗಿರುತ್ತದೆ.ಈ ಎಲ್ಲಾ ಅಂಶಗಳನ್ನು ಪರಾಂಭರಿಸಿ ಮತ್ತು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ಕಂಇ : 82 ಎಂಬಿಎಸ್ 2004 ಬೆಂಗಳೂರು, ದಿನಾಂಕ. 30ನೇ ನವೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಶ್ರೀ ಎಸ್. ಸಿದ್ದರಾಮೇಗೌಡ ದ್ವಿದಸ ಇ ವರು ಸಲ್ಲಿಸಿದ ಮೇಲ್ಮನವಿಯಲ್ಲಿ ಯಾವುದೇ ಹುರುಳು ಇ ರುವುದಿಲ್ಲವಾದ್ದರಿಂದ ಸದರಿಯವರ ಮೇಲ್ಮನವಿಯನ್ನು ವಜಾಗೊಳಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಬಿ.ಗಣಾಚಾರಿ**

ಪಿ.ಆರ್. 1364 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇ ಲಾಖೆ (ಸೇವೆಗಳು).

**ವಿಷಯ:** ಶ್ರೀ ರವೀಂದ್ರ ಬಿನ್ ಚಂದ್ರಶೇಖರ್ ಡಿ ದರ್ಜೆ ನೌಕರ,ತಹಶೀಲ್ದಾರ್ ಕಛೇರಿ, ಚಿತ್ತಾಪುರ್ ಇ ವರು ಸಿಸಿಎ ನಿಯಮಾವಳಿ ನಿಯಮ 18ರ ಅಡಿಯಲ್ಲಿ ಸಲ್ಲಿಸಿದ ಮೇಲ್ಮನವಿ ಬಗ್ಗೆ.

**ಓದಲಾಗಿದೆ:**
1. ಗುಲ್ಬರ್ಗಾ ಜಿಲ್ಲಾಧಿಕಾರಿಯವರ ಆದೇಶ ಸಂಖ್ಯೆ ಕಂ/ಶಿಸ್ತು34/2001-2002/72/02 ದಿನಾಂಕ:1-7-2003ರ ಪತ್ರ
2. ಶ್ರೀ ರವೀಂದ್ರ ಬಿನ್ ಚಂದ್ರಶೇಖರ್ ಡಿ ದರ್ಜೆ ನೌಕರ,ತಹಶೀಲ್ದಾರ್ ಕಛೇರಿ, ಚಿತ್ತಾಪುರ್ ಇ ವರು ಸರ್ಕಾರಕ್ಕೆ ಸಲ್ಲಿಸಿದ ಮೇಲ್ಮನವಿ
3. ಸರ್ಕಾರದ ವಿಚಾರಣಾ ತಿಳುವಳಿಕೆ ಪತ್ರ ಸಂಖ್ಯೆ ಕಂಇ 389 ಬಿಎಂಎಂ 04 ದಿನಾಂಕ 8.9.2004.

**ಪ್ರಸ್ತಾವನೆ:**

ಶ್ರೀ ರವೀಂದ್ರ ಮಾಜಿ ಸಿಪಾಯಿ, ಇ ವರು ನಾಡಕಛೇರಿ, ಐನಾಪುರ್, ತಾಲ್ಲೂಕ್ ಚಿಂಚೋಳಿ, ಗುಲ್ಬರ್ಗ ಜಿಲ್ಲೆ ಇ ಲ್ಲಿ ಗ್ರೂಪ್ ಡಿ ಆಗಿ ಕಾರ್ಯ ನಿರ್ವಹಿಸುತ್ತಿರುವಾಗ ದಿನಾಂಕ:1.1.95 ರಿಂದ 12.10.96 ರವರೆಗೆ 29-10-1996 ರಿಂದ 5.8.1999 ರ ವರೆಗೆ ಮತ್ತು 13.12.99 ರಿಂದ 25.7.2000 ರವರೆಗೆ ಕಚೇರಿಗೆ ಅನಧಿಕೃತ ಗೈರುಹಾಜರಾಗಿರುವ ಪ್ರಯುಕ್ತ ಅವರ ವಿರುದ್ಧ ಶಿಸ್ತು ಕ್ರಮ ನಡೆಸಿ ಸದರಿ ವಿಚಾರಣೆಯಲ್ಲಿ ಆರೋಪ ಸಾಬೀತಾಗಿರುವುದರಿಂದ ಅವರನ್ನು ಗುಲ್ಬರ್ಗ ಜಿಲ್ಲಾಧಿಕಾರಿಗಳು ಮೇಲೆ ಓದಲಾದ ಕ್ರಮಸಂಖ್ಯೆ (1)ರ ಆದೇಶದಲ್ಲಿ ಸೇವೆಯಿಂದ ಕಡ್ಡಾಯವಾಗಿ ನಿವೃತ್ತಿಗೊಳಿಸುವ ದಂಡನೆ ವಿಧಿಸಿ ಆದೇಶಿಸಿರುತ್ತಾರೆ.

ಈ ಆದೇಶವನ್ನು ಪ್ರಶ್ನಿಸಿ ಶ್ರೀ ರವೀಂದ್ರ ಇ ವರು ಮೇಲೆ ಓದಲಾದ ಕ್ರಮಸಂಖ್ಯೆ (2)ರಂತೆ ಸರ್ಕಾರಕ್ಕೆ ಮೇಲ್ಮನವಿ ಸಲ್ಲಿಸಿರುತ್ತಾರೆ. ಈ ಇ ಲಾಖಾ ವಿಚಾರಣಾ ಪ್ರಕರಣದಲ್ಲಿ ವಿಚಾರಣಾಧಿಕಾರಿಗಳೇ ಈ ಪ್ರಕರಣದಲ್ಲಿ ಇ ಲಾಖಾ ವಿಚಾರಣೆ ಹೂಡಲು ಜಿಲ್ಲಾಧಿಕಾರಿಗಳಿಗೆ ಪ್ರಸ್ತಾವ ಕಳುಹಿಸಿರುವುದರಿಂದ ಸ್ವಾಭಾವಿಕ ನ್ಯಾಯತತ್ವಕ್ಕೆ ವಿರುದ್ಧವಾಗಿದೆ ಎಂದು ತಿಳಿಸುತ್ತಾ ಅವರು ಮೇಲ್ಮನವಿದಾರರ ಬಗ್ಗೆ ದ್ವೇಷಭಾವನೆ ಇ ಟ್ಟುಕೊಂಡಿರುವುದರಿಂದ ಈ ವಿಚಾರಣೆ ನಿಯಮ ಬದ್ಧವಾಗಿರುವುದಿಲ್ಲವೆಂದು ವಾದಿಸಿರುತ್ತಾರೆ. ಹಾಗೂ ಈ ಮೇಲ್ಮನವಿಯನ್ನು ಸಲ್ಲಿಸಲು ತಡವಾಗಿದ್ದು ತಾನು "ಭಾನಾಮತಿ" (Witch craft) ರಿಂದ ಬಾಧಿತರಾಗಿರುವುದರಿಂದ ತನಗೆ ಏನೂ ತಿಳಿದಿರುವುದಿಲ್ಲವೆಂದು ತಿಳಿಸಿ ವಿಳಂಬವನ್ನು ಮನ್ನಾ ಮಾಡಿ ಮೇಲ್ಮನವಿಯನ್ನು ಅಂಗೀಕರಿಸಲು ಕೋರಿರುತ್ತಾರೆ.

ಈ ಪ್ರಕರಣವನ್ನು ದಿನಾಂಕ 19.10.04 ಮತ್ತು 19.11.04 ರಂದು ವಿಚಾರಣೆಗೆ ತೆಗೆದುಕೊಳ್ಳಲಾಗಿದೆ. ಅಂದು ಮೇಲ್ಮನವಿದಾರರು ಮತ್ತು ಅವರ ಪರವಾಗಿ ವಾದ ಮಂಡಿಸಲು ಶ್ರೀ ಕೆ. ಧೀರಜ್ ಕುಮಾರ್, ನ್ಯಾಯವಾದಿಗಳು ಹಾಜರಿದ್ದರು. ವಿಚಾರಣಾಧಿಕಾರಿ ಮತ್ತು ವಿಚಾರಣೆ ನಡೆಸಲು ಪ್ರಸ್ತಾವನೆ ಕಳುಹಿಸಿರುವ ಅಧಿಕಾರಿ ಒಬ್ಬರೇ ಆಗಿರುವುದರಿಂದ ಈ ವಿಚಾರಣೆ ನ್ಯಾಯಬದ್ಧವಾಗಿರುವುದಿಲ್ಲವೆಂದು ಮೇಲ್ಮನವಿದಾರರ ಪರವಾಗಿ ಅವರ ನ್ಯಾಯವಾದಿಗಳು ಹೇಳಿಕೆ ನೀಡಿರುತ್ತಾರೆ. ಅದರಂತೆಯೇ Collector Land Acquisition, Ananthanag v. Katiji (1987 SC 1353) ಪ್ರಕರಣದಲ್ಲಿ ಸರ್ವೋಚ್ಛನ್ಯಾಯಾಲಯವು ವಿಳಂಬ ವಿನಾಯತಿ ಬಗ್ಗೆ ನೀಡಿದ ತೀರ್ಪಿನ ಪ್ರತಿಯನ್ನು ಒದಗಿಸಿ ಈ ಪ್ರಕರಣದಲ್ಲಿ ವಿಳಂಬ ವಿನಾಯತಿ ನೀಡಲು ಕೋರಿ ಮೇಲ್ಮನವಿಯನ್ನು ಅಂಗೀಕರಿಸುವಂತೆ ತಮ್ಮ ವಾದವನ್ನು ಮಂಡಿಸಿರುತ್ತಾರೆ. ಈ ವಾದವನ್ನು ಸಮರ್ಥಿಸಿ ಈ ಪ್ರಕರಣವನ್ನು ವಿಚಾರಣೆಗೆ ಅಂಗೀಕರಿಸಿ ಆದೇಶಕ್ಕಾಗಿ ಕಾಯ್ದಿರಿಸಲಾಯಿತು.

**ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 389 ಬಿಎಂಎಂ 2004, ಬೆಂಗಳೂರು, ದಿನಾಂಕ: 30ನೇ ನವೆಂಬರ್ 2004**

ಮೇಲ್ಮನವಿದಾರರು ತನ್ನ ಮೇಲ್ಮನವಿಯಲ್ಲಿ ಎತ್ತಿರುವ ಅಂಶಗಳನ್ನು ಹಾಗೂ ವಿಚಾರಣೆ ವೇಳೆಯಲ್ಲಿ ಅವರ ನ್ಯಾಯವಾದಿಗಳು ಮಂಡಿಸಿದ ವಾದವನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಮೇಲ್ಮನವಿದಾರರು "ಭಾನಾಮತಿ" (Witch craft) ರಿಂದ ಬಾಧಿತರಾಗಿದ್ದರಿಂದ ಕಛೇರಿಗೆ ಅನಧಿಕೃತ ಗೈರು ಹಾಜರಾಗಿರುವ ಬಗ್ಗೆ ಜಿಲ್ಲಾಧಿಕಾರಿಗಳು ವಿಧಿಸಿದ ದಂಡನಾ ಆದೇಶದಿಂದ ಈ ವಿಷಯ ಸ್ಪಷ್ಟವಾಗುತ್ತಿಲ್ಲ. ಈ ಹಿನ್ನೆಲೆಯಲ್ಲಿ ಅವರು ಭಾನಾಮತಿಯಿಂದ ಪೀಡಿತರಾಗಿದ್ದರಿಂದ ಅವರನ್ನು ಕೆಲಸದಿಂದ ತೆಗೆದುಹಾಕಿದ್ದ ಬಗ್ಗೆ ಏನೂ ತಿಳಿಯಲಿಲ್ಲವೆಂದೂ ಆದ ವಿಳಂಬ ಉದ್ದೇಶಪೂರ್ವಕ ಇರುವುದಿಲ್ಲವೆಂದು ತಿಳಿಸಿರುತ್ತಾರೆ ಸದರಿಯವರು ಭಾನಾಮತಿಯಿಂದ ಬಾಧಿತರಾಗಿರುವ ಬಗ್ಗೆ ವೈದ್ಯರ ಪ್ರಮಾಣಪತ್ರ ಆಗಲೀ ಅಥವಾ ಇನ್ನಿತರ ದಾಖಲೆಗಳನ್ನು ಒದಗಿಸಿರುವುದಿಲ್ಲವಾದ್ದರಿಂದ ಈ ವಾದವನ್ನು ಒಪ್ಪಲು ಸಾಧ್ಯವಿಲ್ಲ.

ಮೇಲ್ಮನವಿದಾರರು ಯಾವುದೇ ಪೂರ್ವಾನುಮತಿ ಪಡೆಯದೇ ಕಚೇರಿ ಕೆಲಸಕ್ಕೆ 5 ವರ್ಷ ಮೇಲ್ಪಟ್ಟ ಅವಧಿಗೆ ಅನಧಿಕೃತವಾಗಿ ಗೈರು ಹಾಜರಿದ್ದ ಆರೋಪ ದೃಢಪಟ್ಟಿರುವುದರಿಂದ ಅವರನ್ನು ಗುಲ್ಬರ್ಗಾ ಜಿಲ್ಲಾಧಿಕಾರಿಗಳು ಸೇವೆಯಿಂದ ತೆಗೆದುಹಾಕಿರುವ ಕ್ರಮ ಸಮರ್ಪಕವಾಗಿರುವುದರಿಂದ ಮೇಲ್ಮನವಿಯಲ್ಲಿ ಯಾವುದೇ ಹುರುಳಿಲ್ಲವೆಂದು ಪರಿಗಣಿಸಿ ಮೇಲ್ಮನವಿಯನ್ನು ವಜಾಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಬಿ.ಗಣಾಚಾರಿ**

ಪಿ.ಆರ್. 1365 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇ ಲಾಖೆ (ಸೇವೆಗಳು-1).

## ಶಿಕ್ಷಣ ಸಚಿವಾಲಯ

**ವಿಷಯ:** ಶ್ರೀ ಹೆಚ್.ಶಿವರುದ್ರಪ್ಪ, ಹಿಂದಿನ ವ್ಯವಸ್ಥಾಪಕರು, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಚೇರಿ, ಜಗಳೂರು, ಚಿತ್ರದುರ್ಗ ಜಿಲ್ಲೆ, ಇವರು ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957 ರ ನಿಯಮ 18 ರಡಿ ಕರ್ನಾಟಕ ರಾಜ್ಯಪಾಲರಿಗೆ ಸಲ್ಲಿಸಿರುವ ಮೇಲ್ಮನವಿ ಬಗ್ಗೆ ಆದೇಶಗಳು.

**ಓದಲಾಗಿದೆ:**
1. ದಿನಾಂಕ:4.8.2003 ರ ಸರ್ಕಾರಿ ಆದೇಶ ಸಂ:ಇಡಿ 71 ಡಿಜಿಡಿ 97
2. ದಿನಾಂಕ:31.10.2003 ರ ಶ್ರೀ ಹೆಚ್.ಶಿವರುದ್ರಪ್ಪನವರ ಮೇಲ್ಮನವಿ

**ಸರ್ಕಾರಿ ಆದೇಶ ಸಂಖ್ಯೆ:ಇಡಿ 199 ಡಿಜಿಡಿ 2003, ಬೆಂಗಳೂರು, ದಿನಾಂಕ: 27ನೇ ನವೆಂಬರ್ 2004**

ಶ್ರೀ ಹೆಚ್.ಶಿವರುದ್ರಪ್ಪ, ಇವರು ಹಿಂದೆ ಚಿತ್ರದುರ್ಗ ಜಿಲ್ಲೆಯ ಜಗಳೂರು ತಾಲ್ಲೂಕಿನ ಬಿಇಒ ಕಚೇರಿಯಲ್ಲಿ ವ್ಯವಸ್ಥಾಪಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಶ್ರೀ ರಾಮರೆಡ್ಡಿ, ಮುಖ್ಯ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ಸಂತೆಪೇಟೆ, ಜಗಳೂರು, ಎಂಬುವವರಿಂದ ಅವರ ಸ್ಥಗಿತ ವೇತನ ಬಡ್ತಿಯನ್ನು ಪಾವತಿ ಮಾಡಲು ಇವರು ಹಾಗೂ ಶ್ರೀ ಎಸ್.ಜೋಗಪ್ಪ, ಸಹಾಯಕ ಶಿಕ್ಷಣಾಧಿಕಾರಿ, (ಪ್ರಭಾರಿ ಕ್ಷೇತ್ರ ಶಿಕ್ಷಣಾಧಿಕಾರಿ) ಮತ್ತು ಶ್ರೀ ಮಹಲಿಂಗಪ್ಪ, ಪ್ರಥಮ ದರ್ಜೆ ಸಹಾಯಕರು, ಅನುಕ್ರಮವಾಗಿ ರೂ.200, 500 ಮತ್ತು 200 ಗಳ ಲಂಚವನ್ನು ಸ್ವೀಕರಿಸುತ್ತಿದ್ದಾಗ ದಿನಾಂಕ:2.5.97 ರಂದು ಲೋಕಾಯುಕ್ತರ ಬಲೆಗೆ ಸಿಕ್ಕಿಹಾಕಿಕೊಂಡಿದ್ದರು. ಇವರು ಹಾಗೂ ಇತರರನ್ನು ಶಿಸ್ತು ಕ್ರಮ ಬಾಕಿ ಇರಿಸಿ, ಸಾರ್ವಜನಿಕ ಶಿಕ್ಷಣ ಇಲಾಖಾ ಆಯುಕ್ತರು, ದಿನಾಂಕ:6.6.97 ರ ಆದೇಶದಲ್ಲಿ ಅಮಾನತ್ತಿನಲ್ಲಿರಿಸಿದ್ದರು. ತದನಂತರ ಕರ್ನಾಟಕ ಲೋಕಾಯುಕ್ತರವರು, ಕರ್ನಾಟಕ ಲೋಕಾಯುಕ್ತ ಕಾಯಿದೆಯ ಸೆಕ್ಷನ್ 12(3) ರಂತೆ ಸರ್ಕಾರಕ್ಕೆ ವರದಿ ಸಲ್ಲಿಸಿ ನಿಯಮ 12(4) ರಂತೆ ಕ್ರಮ ಜರುಗಿಸುವಂತೆ ಸರ್ಕಾರವನ್ನು ಕೋರಿದ್ದರು. ಸರ್ಕಾರವು ಪ್ರಕರಣದ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957 ರ ನಿಯಮ 14–ಎ ರಡಿ ವಿಚಾರಣೆ ನಡೆಸಲು ದಿ:26.6.1999 ರ ಮೂಲಕ ಆದೇಶ ಹೊರಡಿಸಿತ್ತು. ಮಾನ್ಯ ಉಪಲೋಕಾಯುಕ್ತರು ಪ್ರಕರಣದಲ್ಲಿ ಸಮಗ್ರ ವಿಚಾರಣೆ ನಡೆಸಲು ವಿಚಾರಣಾಧಿಕಾರಿಯನ್ನು ನೇಮಕ ಮಾಡಿ, ಅವರು ಸಲ್ಲಿಸಿದ ವರದಿಯನ್ನು ಪರಿಶೀಲಿಸಿ ತಮ್ಮ ಶಿಫಾರಸ್ಸಿನೊಂದಿಗೆ ದಿ:16.7.2002 ರಂದು ಸರ್ಕಾರಕ್ಕೆ ವರದಿಯನ್ನು ಕಳುಹಿಸಿದ್ದರು. ವಿಚಾರಣಾ ವರದಿಯ ಅಂಶಗಳನ್ನು ಏಕೆ ಒಪ್ಪಿಕೊಳ್ಳಬಾರದು ಎಂಬುದರ ಬಗ್ಗೆ ಎಲ್ಲಾ ಆಪಾದಿತರಿಗೆ ದಿನಾಂಕ:22.2.2002 ರಂದು ವಿಚಾರಣಾ ವರದಿಯನ್ನು 2ನೇ ಕಾರಣ ಕೇಳುವ ನೋಟೀಸ್ ಮೂಲಕ ಜಾರಿ ಮಾಡಿ ಅವರ ಪ್ರತಿರಕ್ಷಣಾ ಹೇಳಿಕೆಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ಆಪಾದಿತರು ಸಲ್ಲಿಸಿರುವ ಪ್ರತಿರಕ್ಷಣಾ ಹೇಳಿಕೆಯನ್ನು ದಾಖಲೆಗಳೊಂದಿಗೆ ಪರಿಶೀಲಿಸಿದ ನಂತರ ಈ ಮೂವರು ಆಪಾದಿತರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿ, ದಿ:4.8.2003 ರಂದು ಆದೇಶ ಹೊರಡಿಸಲಾಗಿತ್ತು.

ದಿನಾಂಕ:4.8.2003 ರ ಸರ್ಕಾರದ ದಂಡನಾದೇಶದ ವಿರುದ್ಧ ಶ್ರೀ ಹೆಚ್.ಶಿವರುದ್ರಪ್ಪನವರು ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957 ರ ನಿಯಮ 18 ರಡಿ ಮೇಲ್ಮನವಿ ಸಲ್ಲಿಸಿ ಈ ಕೆಳಕಂಡ ಅಂಶಗಳನ್ನು ಪ್ರಸ್ತಾಪಿಸಿದ್ದಾರೆ.

1. Rule 14-A of KCS (CCA) Rules 1957 stipulates procedure in cases entrusted to Lokayukta. According to sub rule (2), shall, not-withstanding anything contained in Rules 9 to 11-A and 13, be applicable for purposes of proceedings against Government servants whose alleged misconduct has been investigated into by the Lokayukta or by Upalokayukta either under provision of KLA Act 1984 or on a reference from Government. Where on investigation against a Government Servant, the Lokayukta or Upalokayukta is of the opinion that disciplinary proceedings shall be taken, he shall forward the record of

investigation along with his recommendations to Government, and the Government, after examining such record may direct for an enquiry into the case by the Lokayukta or the Upalokayukta or direct appropriate Disciplinary Authority to take action in accordance with Rule 12.

2. Rule 12 prescribes procedure for imposing minor penalties. Rule 12(1) says that subject to the provisions of sub rule (3) of Rule 11-A, no order imposing on a Government Servant any of the penalties specified in clauses (i) or (iv-a) of Rule 8 shall be made. Penalties prescribed under Rule 8(i) to (iv-a) are all minor penalties, whereas a major penalty of compulsory retirement has been inflicted on the Appellant which is against to the rules. The punishment of compulsory retirement imposed on the recommendation of the Hon'ble Lokayukta is without jurisdiction illegal, excessive etc.

ಘನವೆತ್ತ ಕರ್ನಾಟಕ ರಾಜ್ಯಪಾಲರು, ಶ್ರೀ ಹೆಚ್.ಶಿವರುದ್ರಪ್ಪನವರು ಸಲ್ಲಿಸಿದ ಮೇಲ್ಮನವಿಯನ್ನು ಶಿಸ್ತು ಕ್ರಮದ ಪೂರಕ ದಾಖಲೆಗಳೊಂದಿಗೆ ಪರಾಮರ್ಶಿಸಿ ಕೆಳಕಂಡಂತೆ ಆದೇಶ ಮಾಡಿದ್ದಾರೆ.

"I have gone through the appeals submitted by Sri H.M.Shivarudrappa, former Manager, B.E.O.s Office, Jagalur and Sri S.Jogappa, former Head Master against the orders of the disciplinary authority vide No.ED 71 (A) DGD 97 dated 04.08.2003 imposing a penalty of Compulsory retirement on the appellants.

Having gone through all the connected records in detail, I find that the contentions advanced by the appellants do not hold water. Hence, I dismiss both the appeals for lack of merit and uphold the orders of the disciplinary authority i.e., the Government."

**T.N.CHATURVEDI**
Governor of Karnataka

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಫ್.ಆರ್.ಸಂಬರಗಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ. (ಸೇ–1,2)

ಪಿ.ಆರ್. 1366

**ವಿಷಯ:** ಶ್ರೀ ಎಸ್. ಜೋಗಪ್ಪ, ಹಿಂದಿನ ಮುಖ್ಯ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ಮಸ್ಕಲ್, ಚಿತ್ರದುರ್ಗ ಜಿಲ್ಲೆ, ಇವರು ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957 ರ ನಿಯಮ 18 ರಡಿ ಕರ್ನಾಟಕ ರಾಜ್ಯಪಾಲರಿಗೆ ಸಲ್ಲಿಸಿರುವ ಮೇಲ್ಮನವಿ ಬಗ್ಗೆ ಆದೇಶಗಳು.

**ಓದಲಾಗಿದೆ:** 1. ದಿನಾಂಕ: 4.8.2003 ರ ಸರ್ಕಾರಿ ಆದೇಶ ಸಂ:ಇಡಿ 71 ಡಿಜಿಡಿ 97
2. ದಿನಾಂಕ: 31.10.2003 ರ ಶ್ರೀ ಎಸ್.ಜೋಗಪ್ಪನವರ ಮೇಲ್ಮನವಿ

**ಸರ್ಕಾರಿ ಆದೇಶ ಸಂಖ್ಯೆ: ಇಡಿ 198 ಡಿಜಿಡಿ 2003 ಬೆಂಗಳೂರು, ದಿನಾಂಕ: 27ನೇ ನವೆಂಬರ್ 2004**

1. ಶ್ರೀ ಎಸ್.ಜೋಗಪ್ಪ, ಇವರು ಹಿಂದೆ ಜಗಳೂರು ತಾಲ್ಲೂಕಿನ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಚೇರಿಯಲ್ಲಿ ಸಹಾಯಕ ಶಿಕ್ಷಣಾಧಿಕಾರಿ (ಪ್ರಭಾರಿ ಕ್ಷೇತ್ರ ಶಿಕ್ಷಣಾಧಿಕಾರಿ) ಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಶ್ರೀ ರಾಮರೆಡ್ಡಿ, ಮುಖ್ಯ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ಸಂತೆಪೇಟೆ, ಜಗಳೂರು, ಎಂಬುವವರಿಂದ ಅವರ ಸ್ಥಗಿತ ವೇತನ ಬಡ್ತಿಯನ್ನು ಪಾವತಿ ಮಾಡಲು ಇವರು ಹಾಗೂ ಶ್ರೀ ಹೆಚ್.ಶಿವರುದ್ರಪ್ಪ, ವ್ಯವಸ್ಥಾಪಕರು, ಮತ್ತು ಶ್ರೀ ಮಹಲಿಂಗಪ್ಪ, ಪ್ರಥಮ ದರ್ಜೆ ಸಹಾಯಕರು, ಅನುಕ್ರಮವಾಗಿ ರೂ.500, ರೂ.200 ಮತ್ತು ರೂ.200 ಗಳ ಲಂಚವನ್ನು ಸ್ವೀಕರಿಸುತ್ತಿದ್ದಾಗ ದಿನಾಂಕ:2.5.97 ರಂದು ಲೋಕಾಯುಕ್ತರ ಬಲೆಗೆ ಸಿಕ್ಕಿಹಾಕಿಕೊಂಡಿದ್ದರು. ಇವರು ಹಾಗೂ ಇತರರನ್ನು ಶಿಸ್ತು ಕ್ರಮ ಬಾಕಿ ಇರಿಸಿ, ಸಾರ್ವಜನಿಕ ಶಿಕ್ಷಣ ಇಲಾಖಾ ಆಯುಕ್ತರು, ದಿನಾಂಕ:6.6.97 ರ ಆದೇಶದಲ್ಲಿ ಅಮಾನತ್ತಿನಲ್ಲಿರಿಸಿದ್ದರು. ತದನಂತರ ಕರ್ನಾಟಕ ಲೋಕಾಯುಕ್ತರವರು, ಕರ್ನಾಟಕ ಲೋಕಾಯುಕ್ತ ಕಾಯಿದೆಯ ಸೆಕ್ಷನ್ 12(3) ರಂತೆ ಸರ್ಕಾರಕ್ಕೆ ವರದಿ ಸಲ್ಲಿಸಿ ನಿಯಮ 12(4) ರಂತೆ ಕ್ರಮ ಜರುಗಿಸುವಂತೆ ಸರ್ಕಾರವನ್ನು ಕೋರಿದ್ದರು. ಸರ್ಕಾರವು ಪ್ರಕರಣದ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957 ರ ನಿಯಮ 14–ಎ ರಡಿ ವಿಚಾರಣೆ ನಡೆಸಲು ದಿ:26.6.1999 ರ ಮೂಲಕ ಆದೇಶ ಹೊರಡಿಸಿತ್ತು. ಮಾನ್ಯ ಉಪಲೋಕಾಯುಕ್ತರು ಪ್ರಕರಣದಲ್ಲಿ ಸಮಗ್ರ ವಿಚಾರಣೆ ನಡೆಸಲು ವಿಚಾರಣಾಧಿಕಾರಿಯನ್ನು ನೇಮಕ ಮಾಡಿ, ಅವರು ಸಲ್ಲಿಸಿದ ವರದಿಯನ್ನು ಪರಿಶೀಲಿಸಿ ತಮ್ಮ ಶಿಫಾರಸ್ಸಿನೊಂದಿಗೆ ದಿ:16.7.2002 ರಂದು ಸರ್ಕಾರಕ್ಕೆ ವರದಿಯನ್ನು ಕಳುಹಿಸಿದ್ದರು. ವಿಚಾರಣಾ ವರದಿಯ ಅಂಶಗಳನ್ನು ಏಕೆ ಒಪ್ಪಿಕೊಳ್ಳಬಾರದು ಎಂಬುದರ ಬಗ್ಗೆ ಎಲ್ಲಾ ಆಪಾದಿತರಿಗೆ ದಿನಾಂಕ:22.2.2002 ರಂದು ವಿಚಾರಣಾ ವರದಿಯನ್ನು 2ನೇ ಕಾರಣ ಕೇಳುವ ನೋಟೀಸ್ ಮೂಲಕ ಜಾರಿ ಮಾಡಿ ಅವರ ಪ್ರತಿರಕ್ಷಣಾ ಹೇಳಿಕೆಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ಆಪಾದಿತರು ಸಲ್ಲಿಸಿರುವ ಪ್ರತಿರಕ್ಷಣಾ ಹೇಳಿಕೆಯನ್ನು ದಾಖಲೆಗಳೊಂದಿಗೆ ಪರಿಶೀಲಿಸಿದ ನಂತರ ಈ ಮೂವರು ಆಪಾದಿತರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿ, ದಿ:4.8.2003 ರಂದು ಆದೇಶ ಹೊರಡಿಸಲಾಗಿತ್ತು.

2. ದಿನಾಂಕ:4.8.2003 ರ ಸರ್ಕಾರದ ದಂಡನಾದೇಶದ ವಿರುದ್ಧ ಶ್ರೀ ಎಸ್.ಜೋಗಪ್ಪ ನವರು ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957 ರ ನಿಯಮ 18 ರಡಿ ಮೇಲ್ಮನವಿಯನ್ನು ಘನವೆತ್ತ ಕರ್ನಾಟಕ ರಾಜ್ಯಪಾಲರಿಗೆ ಸಲ್ಲಿಸಿ ಈ ಕೆಳಕಂಡ ಅಂಶಗಳನ್ನು ಪ್ರಸ್ತಾಪಿಸಿದ್ದಾರೆ.

1. Rule 14-A of KCS (CCA) Rules 1957 stipulates procedure in cases entrusted to Lokayukta. According to sub rule (2), shall, not-withstanding anything contained in Rules 9 to 11-A and 13, be applicable for purposes of proceedings against Government servants whose alleged misconduct has been investigated into by the Lokayukta or by Upalokayukta either under provision of KLA Act 1984 or on a reference from Government. Where on investigation against a Government Servant, the Lokayukta or Upalokayukta is of the opinion that disciplinary proceedings shall be taken, he shall forward the record of

investigation along with his recommendations to Government, and the Government, after examining such record may direct for an enquiry into the case by the Lokayukta or the Upalokayukta or direct appropriate Disciplinary Authority to take action in accordance with Rule 12.

2. Rule 12 prescribes procedure for imposing minor penalties. Rule 12(1) says that subject to the provisions of sub rule (3) of Rule 11-A, no order imposing on a Government Servant any of the penalties specified in clauses (i) to (iv-a) of Rule 8 shall be made. Penalties prescribed under Rule 8(i) to (iv-a) are all minor penalties, whereas a major penalty of compulsory retirement has been inflicted on the Appellant which is against to the rules. The punishment of compulsory retirement imposed on the recommendation of the Hon'ble Lokayukta is without jurisdiction illegal, excessive etc.

3. ಘನವೆತ್ತ ಕರ್ನಾಟಕ ರಾಜ್ಯಪಾಲರು, ಶ್ರಿ ಎಸ್.ಜೋಗಪ್ಪನವರು ಸಲ್ಲಿಸಿದ ಮೇಲ್ಮನವಿಯನ್ನು ಶಿಸ್ತು ಕ್ರಮದ ಪೂರಕ ದಾಖಲೆಗಳೊಂದಿಗೆ ಪರಾಮರ್ಶಿಸಿ ಕೆಳಕಂಡಂತೆ ಆದೇಶ ಮಾಡಿದ್ದಾರೆ.

"I have gone through the appeals submitted by Sri H.M.Shivarudrappa, former Manager, B.E.O.s Office, Jagalur and Sri S.Jogappa, former Head Master against the orders of the disciplinary authority vide No.ED 71 (A) DGD 97 dated 04.08.2003 imposing a penalty of Compulsory retirement on the appellants.

Having gone through all the connected records in detail, I find that the contentions advanced by the appellants do not hold water. Hence, I dismiss both the appeals for lack of merit and uphold the orders of the disciplinary authority i.e., the Government."

**T.N.CHATURVEDI**
Governor of Karnataka

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಫ್.ಆರ್.ಸಂಬರಗಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ. (ಸೇ–1,2)

ಪಿ.ಆರ್. 1367

## ಕಾನೂನು ಸಚಿವಾಲಯ

**ವಿಷಯ:** 2004-2005ನೇ ಸಾಲಿಗೆ ಕರ್ನಾಟಕ ರಾಜ್ಯ ಬಾರ್ ಕೌನ್ಸಿಲ್, ಬೆಂಗಳೂರು ಇವರಿಗೆ ರೂ.9.80 ಲಕ್ಷ ಅನುದಾನ ಮಂಜೂರಾತಿ : ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಅಧಿಸೂಚನೆ ಸಂಖ್ಯೆ: ಲಾ 210 ಎಲ್‌ಸಿಎಲ್ 2002, ದಿನಾಂಕ: 10.7.2003.
2. ಅಸಿಸ್ಟೆಂಟ್ ರಿಜಿಸ್ಟ್ರಾರ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಹೆಚ್‌ಸಿಬಿ:230:83, ದಿನಾಂಕ: 30.9.2004.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1) ದಿನಾಂಕ: 10.7.2003ರ ಅಧಿಸೂಚನೆಯನ್ವಯ ವಕೀಲರುಗಳು ಸಂಘಗಳಿಗೆ ಸಹಾಯಾನುದಾನ ನೀಡುವ ಬಗ್ಗೆ ಸಹಾಯಾನುದಾನ ನಿಯಮಾವಳಿಗಳಿಗೆ ತಿದ್ದುಪಡಿ (Amendment) ತರಲಾಗಿದ್ದು ಅದರಂತೆ ರಾಜ್ಯ ಬಾರ್ ಕೌನ್ಸಿಲ್‌ಗ್ ಪೀಠೋಪಕರಣ ಮತ್ತು ಕಾನೂನು ಪುಸ್ತಕಗಳನ್ನು ಖರೀದಿಸಲು ನಿಗದಿಗೊಳಿಸಿದ್ದ ರೂ.1.00 ಲಕ್ಷ ಅನುದಾನವನ್ನು ತೆಗೆದುಹಾಕಲಾಗಿದೆ ಮತ್ತು ಲೆಕ್ಕ ಶೀರ್ಷಿಕೆ 2014-00-800-9-00 ಕರ್ನಾಟಕ ರಾಜ್ಯ ಬಾರ್ ಕೌನ್ಸಿಲ್ ಇದನ್ನು ಲೆಕ್ಕ ಶೀರ್ಷಿಕೆ 2014-00-800-4-00 ನ್ಯಾಯಾಲಯದ ನೌಕರರಿಗಾಗಿ ತರಬೇತಿ ಸಂಸ್ಥೆ ಇದರಡಿ ವಿಲೀನಗೊಳಿಸಿದ್ದು, ಸದರಿ ಲೆಕ್ಕ ಶೀರ್ಷಿಕೆಯ ಉಪ ಶೀರ್ಷಿಕೆ-059-ಇತರೆ ಖರ್ಚು ಇದರಡಿ ಒದಗಿಸಿದ ರೂ.12.40 ಲಕ್ಷ ರೂ.ಗಳ ಯೋಜನೇತರ ಬಾಬ್ತಿನ ಮೊತ್ತವು ಬಾರ್ ಕೌನ್ಸಿಲ್‌ಗೆ ನೀಡಬೇಕಾದ ರೂ.9.80 ಲಕ್ಷಗಳನ್ನು ಕೂಡ ಒಳಗೊಂಡಿದ್ದು, ಆ ಹಣವನ್ನು ಈ ಕೆಳಕಂಡ ಉದ್ದೇಶಗಳಿಗಾಗಿ ಮೀಸಲಿರಿಸಲಾಗಿದೆ.

1) ಕಿರಿಯ ವಕೀಲರುಗಳಿಗೆ ಕಾನೂನು ಕಮ್ಮಟ:ಕಾರ್ಯಾಗಾರ ಹಾಗೂ ವಕೀಲರುಗಳಿಗೆ ತರಬೇತಿ ನೀಡಲು
2) ಸೆಮಿನಾರ್ ಮತ್ತು ಕಾನೂನು ಉಪನ್ಯಾಸಗಳನ್ನು ನೀಡಲು

ಮೇಲೆ ಓದಲಾದ ಕ್ರಮಾಂಕ (2) ದಿನಾಂಕ: 30.9.2004ರ ಪತ್ರದಲ್ಲಿ ಅಸಿಸ್ಟೆಂಟ್ ರಿಜಿಸ್ಟ್ರಾರ್ ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರು ಕೆಳಕಂಡ ಉದ್ದೇಶಗಳಿಗಾಗಿ ರೂ.9.80 ಲಕ್ಷ ಅನುದಾನವನ್ನು ಬಾರ್ ಕೌನ್ಸಿಲ್‌ಗೆ ಒದಗಿಸುವಂತೆ ಕೋರಿರುತ್ತಾರೆ.

1) ಕಿರಿಯ ವಕೀಲರುಗಳಿಗೆ ಕಾನೂನು ಕಮ್ಮಟ:ಕಾರ್ಯಾಗಾರ ಹಾಗೂ ವಕೀಲರುಗಳಿಗೆ ತರಬೇತಿ ನೀಡಲು
2) ಸೆಮಿನಾರ್ ಮತ್ತು ಕಾನೂನು ಉಪನ್ಯಾಸ ನೀಡಲು

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 90 ಎಲ್‌ಸಿಎಲ್ 2004, ಬೆಂಗಳೂರು, ದಿನಾಂಕ: 26ನೇ ನವೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಬಾರ್ ಕೌನ್ಸಿಲ್‌ಗೆ ಪ್ರಸಕ್ತ ಸಾಲಿಗೆ ರೂ.9.80 ಲಕ್ಷಗಳ (ಒಂಭತ್ತು ಲಕ್ಷ ಎಂಭತ್ತು ಸಾವಿರ ರೂ. ಮಾತ್ರ) ಅನುದಾನವನ್ನು ಬಿಡುಗಡೆ ಮಾಡಿದೆ.

ಸದರಿ ಮೊತ್ತವನ್ನು ಮೇಲಿನ ಉದ್ದೇಶಗಳಿಗಾಗಿ ಮಾತ್ರ ವಿನಿಯೋಗಿಸತಕ್ಕದ್ದು.

2004-2005ನೇ ಸಾಲಿನಲ್ಲಿ ಬಿಡುಗಡೆ ಮಾಡಲಾಗುವ ಮೊತ್ತಕ್ಕೆ ಉಪಯೋಗಿತ ಪ್ರಮಾಣ ಪತ್ರವನ್ನು (Utilization Certificate) ಅಡ್ವೊಕೇಟ್ ಜನರಲ್ (ಸಕ್ಷಮ ಪ್ರಾಧಿಕಾರದ) ರವರ ಮೇಲು ರುಜುವಿನೊಂದಿಗೆ ಸಲ್ಲಿಸುವ ಷರತ್ತಿಗೊಳಪಟ್ಟಿದೆ.

ಈ ಸಹಾಯಾನುದಾನವನ್ನು ಲೆಕ್ಕ ಶೀರ್ಷಿಕೆ 2014-00-800-4-00 ನ್ಯಾಯಾಲಯದ ನೌಕರರಿಗಾಗಿ ತರಬೇತಿ ಸಂಸ್ಥೆ ಇದರಡಿಯ ಉಪ ಶೀರ್ಷಿಕೆ-059-ಇತರೆ ಖರ್ಚು ಇದರಡಿಯ ಯೋಜನೇತರ ಬಾಬ್ತಿನಲ್ಲಿ ಒದಗಿಸಲಾದ ಹಣದಿಂದ ಭರಿಸತಕ್ಕದ್ದು.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 1996 ದಿನಾಂಕ: 10.7.96 ರನ್ವಯ ಕಾನೂನು ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ದಯಾನಂದ ಶೆಟ್ಟಿ**

ಪಿ.ಆರ್. 1368 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ), ಕಾನೂನು ಇಲಾಖೆ (ಆಡಳಿತ-2).

**ಸಾರಿಗೆ ಸಚಿವಾಲಯ**

**ವಿಷಯ:** ಶ್ರೀ ಅಫ್ಜಲ್ ಅಹಮದ್ ಖಾನ್, ಪ್ರಾದೇಶಿಕ ಸಾರಿಗೆ ಅಧಿಕಾರಿ, ಇಂದಿರಾನಗರ, ಬೆಂಗಳೂರು (ಪೂರ್ವ) ಇವರು ವಾಹನ ವಿತರಕರುಗಳಿಂದ ಅನಧಿಕೃತ ವಂತಿಕೆ ವಸೂಲು ಮಾಡಿದ ಬಗ್ಗೆ - ಶಿಸ್ತಿನ ಕ್ರಮ ಕುರಿತು.

**ಓದಲಾಗಿದೆ:** ಸಾರಿಗೆ ಆಯುಕ್ತರು, ಕರ್ನಾಟಕ ಸರ್ಕಾರ, ಇವರ ಪತ್ರ ಸಂಖ್ಯೆ: ಸಾಆ:ಸಿಬ್ಬಂದಿ-1:ಪಿಆರ್-181:2004-05, ದಿನಾಂಕ: 5.12.2004.

**ಪ್ರಸ್ತಾವನೆ:**

ಸಾರಿಗೆ ಆಯುಕ್ತರು ತಮ್ಮ ವರದಿಯಲ್ಲಿ:- ದಿನಾಂಕ: 5.12.2004 ಇಂಡಿಯನ್ ಎಕ್ಸ್‌ಪ್ರೆಸ್ ದಿನಪತ್ರಿಕೆಯ ಪುಟ-3 ರಲ್ಲಿ ಸಾರಿಗೆ ಇಲಾಖೆಗೆ ಸಂಬಂಧಿಸಿದಂತೆ "RTO launches collection drive to check pollution" ಎಂಬ ತಲೆಬರಹದ ಅಡಿಯಲ್ಲಿ ಪ್ರಕಟವಾಗಿರುವ ವರದಿಯನ್ನು ಉಲ್ಲೇಖಿಸಿಸುತ್ತಾ ಸದರಿ ವರದಿಯನ್ನು ಪರಿಶೀಲಿಸಿರುವುದಾಗಿಯೂ ಸಾರಿಗೆ ಆಯುಕ್ತರಾದ ತಾವು ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೆಂಗಳೂರು (ಪೂರ್ವ) ಕಛೇರಿಯಿಂದ ಹಮ್ಮಿಕ್ಕೊಂಡ ವಾಯುಮಾಲಿನ್ಯ ಮಾಸಾಚರಣೆ ಕಾರ್ಯಕ್ರಮಗಳನ್ನು ನಡೆಸಿರುವ ವೆಚ್ಚವನ್ನು ಸಾರ್ವಜನಿಕರಿಂದ ವಸೂಲಿ ಮಾಡಿ ಭರಿಸುವಂತೆ ಆದೇಶ ನೀಡಿರುವುದಿಲ್ಲವೆಂದು, ಆದರೆ ಪ್ರಾದೇಶಿಕ ಸಾರಿಗೆ ಅಧಿಕಾರಿಯವರು, ಬೆಂಗಳೂರು (ಪೂರ್ವ) ರವರು ನಡಾವಳಿಯನ್ನು ಹೊರಡಿಸಿ ಮೋಟಾರ್ ಸೈಕಲ್ ವಿತರಕರು : ಮೋಟಾರು ಕಾರು ವಿತರಕರು ಇಂತಿಷ್ಟೆ ವಂತಿಕೆಯನ್ನು ನೀಡಬೇಕೆಂದು ನಿಗದಿಗೊಳಿಸಿ ವಸೂಲಿ ಮಾಡಿರುವುದು ಕಾನೂನು ಬಾಹಿರ ಕ್ರಮವಾಗಿದೆಯೆಂದು ಇದಕ್ಕೆ ಸರ್ಕಾರದ ಅನುಮೋದನೆ ಇಲ್ಲದೆ ಇಂತಹ ವಂತಿಕೆಗಳನ್ನು ವಸೂಲು ಮಾಡುವುದು ಕರ್ನಾಟಕ ನಾಗರೀಕ ಸೇವೆಗಳು (ನಡತೆ) ನಿಯಮಗಳು, 1966ರ ನಿಯಮ 13ನ್ನು ಉಲ್ಲಂಘಿಸಿದೆಯೆಂದು, ಪ್ರಾದೇಶಿಕ ಸಾರಿಗೆ ಅಧಿಕಾರಿ ನಿಯಮಬಾಹಿರವಾಗಿ ವಂತಿಕೆ ವಸೂಲಿ ಮಾಡಿ ದುರ್ನಡತೆ ಎಸಗಿ ಅಧಿಕಾರ ದುರುಪಯೋಗದ ಮೂಲಕ ಕರ್ತವ್ಯ ಲೋಪ ಎಸಗಿರುತ್ತಾರೆಂದು, ಶ್ರೀ ಅಫ್ಜಲ್ ಅಹಮದ್ ಖಾನ್, ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೆಂಗಳೂರು (ಪೂರ್ವ) ಇವರ ಮೇಲೆ ಶಿಸ್ತು ಕ್ರಮ ಜರುಗಿಸುವ ಅವಶ್ಯಕತೆ ಇರುವುದರಿಂದ ವಿಚಾರಣೆ ಬಾಕಿ ಇಟ್ಟು ಇವರನ್ನು ಸೇವೆಯಿಂದ ಅಮಾನತ್ತುಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಸನ್ನಿವೇಶಗಳನ್ನು ಪರಿಶೀಲಿಸಿ ಶ್ರೀ ಅಫ್ಜಲ್ ಅಹಮದ್ ಖಾನ್, ಪ್ರಾದೇಶಿಕ ಸಾರಿಗೆ ಅಧಿಕಾರಿ, ಇಂದಿರಾನಗರ, ಬೆಂಗಳೂರು (ಪೂರ್ವ) ರವರನ್ನು ವಿಚಾರಣೆ ಬಾಕಿ ಇಟ್ಟು ಸೇವೆಯಿಂದ ಅಮಾನತ್ತಿನಲ್ಲಿಡುವುದು ಅವಶ್ಯಕತೆಂದು ಸರ್ಕಾರಕ್ಕೆ ಮನವರಿಕೆಯಾಗಿರುತ್ತದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಾರಿಇ 251 ಸಾಇಸೇ 2004, ಬೆಂಗಳೂರು, ದಿನಾಂಕ: 9ನೇ ಡಿಸೆಂಬರ್ 2004**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10(1) (ಬಿ)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಅಫ್ಜಲ್ ಅಹಮದ್ ಖಾನ್, ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೆಂಗಳೂರು (ಪೂರ್ವ) ಇಂದಿರಾನಗರ ರವರನ್ನು ಇಲಾಖಾ ವಿಚಾರಣೆ ಬಾಕಿ ಇಟ್ಟು ಕೂಡಲೇ ಜಾರಿಗೆ ಬರುವಂತೆ ಅಮಾನತ್ತುಗೊಳಿಸಿ ಆದೇಶಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ನೌಕರರು ನಿಯಮಾನುಸಾರ ಜೀವನಾಧಾರ ಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ. ಸದರಿ ನೌಕರರು ಸಂಬಂಧಪಟ್ಟ ಪ್ರಾಧಿಕಾರದ ಅನುಮತಿಯಿಲ್ಲದೇ ಕೇಂದ್ರ ಸ್ಥಾನ ಬಿಡಬಾರದೆಂದು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಎಂ. ಈಶ್ವರ**

ಪಿ.ಆರ್. 1385 ಸರ್ಕಾರದ ಉಪ ಕಾರ್ಯದರ್ಶಿ, ಸಾರಿಗೆ ಇಲಾಖೆ.

**ತಿದ್ದುಪಡಿ ಸಂಖ್ಯೆ: ಸಾರಿಇ 251 ಸಾಇಸೇ 2004, ಬೆಂಗಳೂರು, ದಿನಾಂಕ: 9ನೇ ಡಿಸೆಂಬರ್ 2004**

**ವಿಷಯ:** ಶ್ರೀ ಅಫ್ಜಲ್ ಅಹಮದ್ ಖಾನ್, ಪ್ರಾದೇಶಿಕ ಸಾರಿಗೆ ಅಧಿಕಾರಿ, ಇಂದಿರಾನಗರ, ಬೆಂಗಳೂರು (ಪೂರ್ವ) ಇವರು ವಾಹನ ವಿತರಕರುಗಳಿಂದ ಅನಧಿಕೃತ ವಂತಿಕೆ ವಸೂಲು ಮಾಡಿದ ಬಗ್ಗೆ - ಶಿಸ್ತಿನ ಕ್ರಮ ಕುರಿತು.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಸಾರಿಇ 251 ಸಾಇಸೇ 2004, ದಿನಾಂಕ: 9.12.2004.

ಮೇಲೆ ಓದಲಾದ ಸರ್ಕಾರಿ ಆದೇಶ ಸಂಖ್ಯೆ: ಸಾರಿಇ 251 ಸಾಇಸೇ 2004, ದಿನಾಂಕ: 9.12.2004 ರಲ್ಲಿ ಶ್ರೀ ಅಫ್ಜಲ್ ಅಹಮದ್ ಖಾನ್, ಪ್ರಾದೇಶಿಕ ಸಾರಿಗೆ ಅಧಿಕಾರಿ, ಇಂದಿರಾನಗರ, ಬೆಂಗಳೂರು (ಪೂರ್ವ) ರವರನ್ನು ಸೇವೆಯಿಂದ ಅವರ ವಿರುದ್ಧ ಇಲಾಖಾ ವಿಚಾರಣೆ ಕಾಯ್ದಿರಿಸಿ ಅಮಾನತ್ತುಗೊಳಿಸಲಾಗಿದ್ದು, ಸದರಿ ಸರ್ಕಾರಿ ಆದೇಶದಲ್ಲಿ ನಮೂದಿಸಿರುವ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 10 (1) (ಬಿ)ಗೆ ಬದಲಾಗಿ “ನಿಯಮ 10(1) (ಡಿ)” ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಎಂ. ಈಶ್ವರ**

ಪಿ.ಆರ್. 1386 ಸರ್ಕಾರದ ಉಪ ಕಾರ್ಯದರ್ಶಿ, ಸಾರಿಗೆ ಇಲಾಖೆ.